ಶ್ರೀಸುಯಮೀರಾಘವೇಂದ್ರ
ಪ್ರಕಾಶನ ಸಂಖ್ಯೆ - 36




ಶ್ರೀಸುಶೀಲೇಂದ್ರವಿಜಯಮಾಲಾ
ಸಂಖ್ಯೆ - 26

ಕಮಲೇಶ ಕುಸುಮ - 16

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಈಶಾವಾಸ್ಯೋಪನಿಷತ್ ಖಂಡಾರ್ಥಃ

ಅನುವಾದಕರು :

ವಿದ್ವಾನ್ ಪ್ರೊ. ಸಾಣೂರು ಭೀಮಭಟ್ಟರು

ಪ್ರಕಾಶಕರು :

ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು - ಬೆಂಗಳೂರು

2010

Rarest Archiver

# ಸಂಸ್ಥೆಯ ಸಾಮ್ರಾಟ್ ಪೋಷಕರು




ಪೊಡವಿಗೊಡೆಯರಾದ ಶ್ರೀಗುರುರಾಯರನ್ನು ಹೃದಯಗುಡಿಯಲ್ಲಿ ಅಡಗಿಸಿ ಎಂದೂ ಮಾಸದ ಮೃದು ಮಧುರ ಮುಗ್ಧ ನಗೆಯನ್ನು ಹೊರಸೂಸುತ್ತ ತಮ್ಮ ಅಮೃತಹಸ್ತದ ಹಿಡಿಯಿಂದ ಮಂತ್ರಾಕ್ಷತೆಯನ್ನು ನೀಡುತ್ತಾ ತೇಡಿಬಂದು ಬೇಡಿದವರ ಇಷ್ಟಾರ್ಥಗಳನ್ನು ಇಡೇರಿಸುತ್ತಾ ಅನಂತ ಭಕ್ತಸಮೂಹದಿಂದ

**'ನಡೆದಾಡುವ ರಾಯರು'** ಎಂದು

ಪ್ರಾತಃಸ್ಮರಣೀಯರಾಗಿ ಭಕ್ತಿ ಗೌರವದಿಂದ ಪೂಜಿಸಲ್ಪಡುತ್ತಿರುವ

**'ಶ್ರೀ ರಾಯರ ಕರುಣೆಯ ಕಂದರಾದ' ಪರಮಪೂಜ್ಯ**

**108 ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು.**

Rarest Archiver

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಗ್ರಂಥಸಮರ್ಪಣೆ

ಭಾಷ್ಯಕಾರರಾಗಿ, ಟೀಕಾಕಾರರಾಗಿ, ಟಿಪ್ಪಣಿಕಾರರಾಗಿ,
ಶ್ರೀಮನ್ಮಧ್ವಸಿದ್ಧಾಂತವೆಂಬ ತತ್ತ್ವಜ್ಞಾನ ಕಲ್ಪವೃಕ್ಷವನ್ನು
ತಮ್ಮ ಅಪೂರ್ವ, ಅಸದೃಶ, ಶ್ರೇಷ್ಠ ಗ್ರಂಥಗಳಿಂದ
ಫಲಭರಿತವನ್ನಾಗಿಸಿ, ಆ ಪರಿಮಳಯುಕ್ತವಾದ
ಸತ್ಫಲದ ಸವಿಜೇನಿನ ತತ್ತ್ವಸುಧೆಯನ್ನು ವಸುಧೆಯೊಳು
ಸುಧೀಜನರು ಆಸ್ವಾದಿಸಿ ಆತ್ಮೋದ್ಧಾರದ ಅನುಭವವನ್ನು
ಹೊಂದಿ, ಆನಂದಿಸುವಂತೆ ಅನುಗ್ರಹಿಸಿ
ಆಶೀರ್ವದಿಸುತ್ತಿರುವ ಅತ್ಯಂತ ದಯಾಳುಗಳಾದ
ಜಗದ್ಗುರು ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ
ಇಪತ್ತೈದು ಶ್ರೇಷ್ಠಗ್ರಂಥಗಳಿಂದ ಸಮಲಂಕೃತವಾದ "ಶ್ರೀ ಗುರುರಾಜಸಂಪುಟಮ್"
ಎಂಬ ಪವಿತ್ರವಾದ ಗ್ರಂಥಪುಷ್ಪವನ್ನು
ಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ 75ನೇ ವರ್ಷದ
ವರ್ಧಂತ್ಯುತ್ಸವದ ಸವಿನೆನಪಿಗಾಗಿ ಹಾಗೂ
ಶ್ರೀಸುಯಮಿ ರಾಘವೇಂದ್ರ ಸಂಶೋಧನ ಕೇಂದ್ರದ
ಪಂಚಾದಶ ಸಂಸ್ಥಾಪನಾ ಮಹೋತ್ಸವದ ಸಂಸ್ಮರಣಾರ್ಥವಾಗಿ
ಶ್ರೀರಾಯರ ಪರಮಪಾವನ ಚರಣಕಮಲಗಳಲ್ಲಿ
ಪರಮಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ
ಅಮೃತಹಸ್ತಗಳಿಂದ ಸದ್ಭಕ್ತಿ-ಶ್ರದ್ಧಾದರ
ನಮನಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.



ಶ್ರೀಗುರುರಾಜರ ಚರಣಸೇವಕರು

ಪ್ರಕಾಶಕರು
ಶ್ರೀಸುಯಮೀ-ರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು-ಬೆಂಗಳೂರು

ದಿನಾಂಕ 23-09-2010
ಮಂತ್ರಾಲಯಂ

Rarest Archiver

# ಕುಲಗುರುಗಳು



ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು

Rarest Archiver

## ಸಂಶೋಧನ ಕೇಂದ್ರದ ಸಾಮ್ರಾಟ್ ಪೋಷಕರು



ಶ್ರೀ ಸುಯಮೀಂದ್ರತೀರ್ಥರು

Rarest Archiver

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು



ಸಾಮ್ರಾಟ್ ಪೋಷಕರು : ಶ್ರೀ ಸುಶಮೀಂದ್ರತೀರ್ಥರು ಹಾಗೂ
ಶ್ರೀ ಸುಯತೀಂದ್ರತೀರ್ಥರು

Rarest Archiver

# ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು



ರಾಜಾ. ಶ್ರೀ. ವೇಣುಗೋಪಾಲಾಚಾರ್ಯ



ರಾಜಾ. ಶ್ರೀ. ಗುರುರಾಜಾಚಾರ್ಯ



ರಾಜಾ. ಶ್ರೀ. ಲಕ್ಷ್ಮೀನಾರಾಯಣಾಚಾರ್ಯ



ಡಾ. ಹುಲಿ. ಕೃ. ವೇದವ್ಯಾಸಾಚಾರ್ಯ

Rarest Archiver

ಸಂಶೋಧನ ಕೇಂದ್ರದ ಸಂಸ್ಥಾಪಕರು

## “ಶ್ರೀರಾಘವೇಂದ್ರಗುರುವಂಶಭೂಷಣಂ”

## ರಾಜಾ. ಶ್ರೀ. ಗುರುರಾಜಾಚಾರ್ಯ



Rarest Archiver

॥ ಶ್ರೀಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಹಂಸನಾಮಕ ಪರಮಾತ್ಮಪ್ರವರ್ತಿತ ಜ್ಞಾನಪೀಠಾಧ್ಯಕ್ಷರಾದ
ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ 108 ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರ
ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ 108 ಶ್ರೀಸುಶಮೀಂದ್ರತೀರ್ಥಶ್ರೀಪಾದಂಗಳವರ
ವರಕುಮಾರಕರಾದ

**ಪರಮಪೂಜ್ಯ ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ**

75 ನೇ ವರ್ಷದ ವರ್ಧಂತ್ಯುತ್ಸವದ ಸವಿನೆನಪಿಗಾಗಿ ಪ್ರಕಾಶಿಸಲ್ಪಟ್ಟ

# ಶ್ರೀಗುರುರಾಜರ ಗ್ರಂಥರತ್ನ

*॥ ಜೀಯಾತ್ ಶ್ರೀಸುಯತೀಂದ್ರತೀರ್ಥಸಂಯಮಿಮಣೇ ವೇದಾಂತರಾಜ್ಯೇ ಚಿರಮ್ ॥*

Rarest Archiver

॥ ಶ್ರೀಃ ॥

॥ ಶ್ರೀಮೂಲರಾಮೋ ವಿಜಯತೇತರಾಮ್ ॥

॥ ಶ್ರೀಗುರುರಾಜೋ ವಿಜಯತೇ ॥

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಈಶಾವಾಸ್ಯೋಪನಿಷತ್ ಖಂಡಾರ್ಥಃ

ಕನ್ನಡಾನುವಾದ :

**ವಿದ್ವಾನ್ ಪ್ರೋ. ಸಾಣೂರು ಭೀಮಭಟ್ಟರು**

## ಉಪನಿಷತ್ತುಗಳ ಮುನ್ನೋಟ

**ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ಪರಮ್ ॥**

ಕೈಯನ್ನು ಮೇಲಕ್ಕೆತ್ತಿ ಇದು ಸತ್ಯವೆಂದು ಆಣೆಯಿಟ್ಟು ಮೂರು ಬಾರಿ ಹೇಳಿ ವೇದವೆಂಬ ಶಾಸ್ತ್ರಕ್ಕಿಂತ ಶ್ರೇಷ್ಠವಾದುದು ಇಲ್ಲ, ಕೇಶವನಿಗಿಂತ ದೊಡ್ಡ ದೇವರಿಲ್ಲ ಎಂದು, ವೇದವೇ ಸರ್ವೋತ್ತಮ ಶಾಸ್ತ್ರವೆಂದು, ಮಹಾಭಾರತದಲ್ಲಿ ಘಂಟಾಘೋಷವಾಗಿ ಸಾರಿದ್ದಾರೆ. ಈ ವೇದವು ಮಂತ್ರ, ಬ್ರಾಹ್ಮಣ, ಆರಣ್ಯಕ, ಉಪನಿಷತ್ ಎಂಬ ನಾಲ್ಕು ವಿಭಾಗಗಳನ್ನೊಳಗೊಂಡಿದೆ. ಅವುಗಳಲ್ಲಿ ಉಪನಿಷತ್ತು ಗುರುವು ಶಿಷ್ಯನಿಗೆ ಹೇಳುವ ವೇದಭಾಗ. ಇದು ಆರಣ್ಯಕದಲ್ಲಿಯೇ ಸೇರಿರುವುದರಿಂದ ಮಂತ್ರ ಬ್ರಾಹ್ಮಣ ಆರಣ್ಯಕ ಎಂದು ವೇದದಲ್ಲಿ ಮೂರೇ ಭಾಗವೆಂದೂ ಹೇಳುತ್ತಾರೆ. ಇದು ರಹಸ್ಯವಿದ್ಯೆಯು ಎಂದು ಎಲ್ಲರ ಅಭಿಪ್ರಾಯವು ಇದೆ. ಹೀಗೆ ಗುಹ್ಯಾದೇಶ ಅಥವಾ ರಹಸ್ಯೋಪದೇಶ ಎಂದು ಹೇಳಲ್ಪಡುವ ಉಪನಿಷತ್ತುಗಳು ಆರಣ್ಯಕದ ಕೊನೆಯ ಭಾಗದಲ್ಲಿ ಸೇರಿವೆ. ಅನಂತಾ ವೈ ವೇದಾಃ ಎಂಬಂತೆ ವೇದಗಳು ಅನಂತವಾಗಿರುವಂತೆ ಉಪನಿಷತ್ತುಗಳೂ ಅನಂತವಾಗಿರಬೇಕು. ಆದರೂ ಪ್ರಸಿದ್ಧವಾದ ಉಪನಿಷತ್ತುಗಳು ಈಶಾವಾಸ್ಯ, ತಲವಕಾರ, ಕೇನ, ಕಾಠಕ, ಷಟ್‌ಪ್ರಶ್ನ, ಮುಂಡಕ, ಮಾಂಡೂಕ್ಯ ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ ಇವು ಹತ್ತು, ಇವಲ್ಲದೆ ಶ್ವೇತಾಶ್ವತರ, ಗರ್ಭ ಮುಂತಾದ ಕೆಲವು ಉಪನಿಷತ್ತುಗಳನ್ನು ಉದಾಹರಿಸಿದ್ದಾರೆ. ಇವುಗಳಲ್ಲಿ ಐತರೇಯ ಮತ್ತು ಕೌಷೀತಕಿ ಬ್ರಾಹ್ಮಣೋಪನಿಷತ್ ಇವುಗಳಿಗೆ ಶಾಂತಿ ಪಾಠವು ಹೀಗಿದೆ.

**ವಾಙ್ ಮೇ ಮನಸಿ ಪ್ರತಿಷ್ಠಿತಾ । ಮನೋ ಮೇ ವಾಚಿ ಪ್ರತಿಷ್ಠಿತಮ್ । ಆವಿರಾವಿರ್ಮ ಏಧಿ । ವೇದಸ್ಯ ಮ ಆಣೀಸ್ಥ । ಶ್ರುತಂ ಮೇ ಮಾ ಪ್ರಹಾಸೀಃ । ಅನೇನಾಧೀತೇನ ಅಹೋರಾತ್ರಾನ್ ಸಂದಧಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಮ್ । ಅವತು ವಕ್ತಾರಮ್ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

Rarest Archiver

ಇವೆರಡು ಋಗ್ವೇದದ ಉಪನಿಷತ್ತುಗಳು. ಈಶಾವಾಸ್ಯ, ಬೃಹದಾರಣ್ಯಕ ಮತ್ತು ಶ್ವೇತಾಶ್ವತರ ಈ ಉಪನಿಷತ್ತುಗಳು ಶುಕ್ಲಯಜುರ್ವೇದದ ವಾಜಸನೇಯ ಸಂಹಿತೆಯ ಉಪನಿಷತ್ತುಗಳು. ಇವುಗಳ ಶಾಂತಿ ಪಾಠವು ಹೀಗಿದೆ.

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**
**ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಕಾಠಕ ತೈತ್ತಿರೀಯ ಇವೆರಡು ಕೃಷ್ಣಯಜುರ್ವೇದದ ಉಪನಿಷತ್ತುಗಳು. ಇವುಗಳ ಶಾಂತಿಪಾಠವು ಹೀಗಿದೆ.

**ಸಹನಾವವತು । ಸಹನೌ ಭುನಕ್ತು । ಸಹವೀರ್ಯಂ ಕರವಾವಹೈ ।**
**ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥**
**ಓಂ ಶಾಂತಿಃ ಶಾಂತಿಃ ಶಾಂತಿಃ ॥**

ತಲವಕಾರ ಮತ್ತು ಛಾಂದೋಗ್ಯ ಎಂಬ ಸಾಮವೇದಕ್ಕೆ ಸೇರಿದ ಎರಡು ಉಪನಿಷತ್ತುಗಳ ಶಾಂತಿಪಾಠವು ಹೀಗಿದೆ.

**ಓಂ ಆಪ್ಯಾಯಂತು ಮಮಾಂಗಾನಿ ವಾಕ್‌ಪ್ರಾಣಶ್ಚಕ್ಷುಃಶ್ರೋತ್ರಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೌಪನಿಷದಂ ಮಾಹಂ ಬ್ರಹ್ಮ ನಿರಾಕುರ್ಯಾಂ ಮಾ ಮಾ ಬ್ರಹ್ಮ ನಿರಾಕರೋದನಿಕಾರಣಮಸ್ತ್ವನಿರಾಕರಣಂ ಮೇಽಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಪಟ್‌ಪ್ರಶ್ನ ಮಾಂಡೂಕ, ಅಥರ್ವಣೋಪನಿಷತ್ತುಗಳು ಅಥರ್ವಣವೇದಕ್ಕೆ ಸೇರಿದವುಗಳು, ಅವುಗಳ ಶಾಂತಿಪಾಠವು ಹೀಗಿದೆ.

**ಓಂ ಭದ್ರಂ ಕರ್ಣೇಭಿಃ ಶೃಣುಮಾಯ ದೇವಾಃ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।**
**ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥**
**ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ ಸ್ವಸ್ತಿನಃ ಪೂಷಾ ವಿಶ್ವವೇದಾಃ ।**
**ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ ಸ್ವಸ್ತಿನೋ ಬೃಹಸ್ಪತಿರ್ದಧಾತು ॥**
**ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಇವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ ಎಂಬ 10 ಉಪನಿಷತ್ತುಗಳು ಪ್ರಸಿದ್ಧವಾಗಿವೆ.

ಇವುಗಳಿಗೆ ದ್ವೈತ ಅದ್ವೈತ ಮತಾಚಾರ್ಯರು ಭಾಷ್ಯಗಳನ್ನು ಬರೆದಿರುತ್ತಾರೆ. ವಿಶಿಷ್ಟಾದ್ವೈತಮತಾನುಸಾರಿಯಾದ ಭಾಷ್ಯಗಳೂ ಇವೆ.

ಎಲ್ಲಾ ಉಪನಿಷತ್ತುಗಳು ಬ್ರಹ್ಮ ವಿದ್ಯೆಯನ್ನು ಬೋಧಿಸುತ್ತವೆ ಎಂಬ ವಿಷಯವು ಎಲ್ಲರಿಗೂ ಸಂಮತವಾಗಿದೆ. ಇವುಗಳ ಅರ್ಥವನ್ನು ಬ್ರಹ್ಮಸೂತ್ರಗಳಲ್ಲಿ ವೇದವ್ಯಾಸರು ನಿಶ್ಚಯಿಸಿರುತ್ತಾರೆ ಎಂದು ಎಲ್ಲರಿಗೂ ಒಪ್ಪಿಗೆಯಿದೆ. ಶ್ರೀ ಶಂಕರಾಚಾರ್ಯರು ಬ್ರಹ್ಮ ಸತ್ಯಂ ಜಗನ್ಮಿಥ್ಯಾ, ಜೀವೋ ಬ್ರಹ್ಮೈವ ನಾಪರಃ ಎಂದು ಹೇಳುತ್ತಾ, ಉಪನಿಷತ್ತುಗಳು ಜೀವ

Rarest Archiver

ಬ್ರಹ್ಮೈಕ್ಯವನ್ನು ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುತ್ತವೆ ಎಂದು ತಮ್ಮ ಉಪನಿಷದ್ ಭಾಷ್ಯಗಳಲ್ಲಿ ತಿಳಿಸಿರುತ್ತಾರೆ. ಶ್ರೀ ರಾಮಾನುಜಾಚಾರ್ಯರು ಶಂಕರರ ಭಾಷ್ಯವನ್ನು ಖಂಡಿಸಿ ತಮ್ಮ ವಿಶಿಷ್ಟಾದ್ವೈತ ತತ್ವವನ್ನು ತಿಳಿಸುವ ಬ್ರಹ್ಮಸೂತ್ರಭಾಷ್ಯವನ್ನು ರಚಿಸಿದ್ದಾರೆ. ಪ್ರಪಂಚಕ್ಕೆ ಪರಬ್ರಹ್ಮವು ನಿಮಿತ್ತವೂ ಮತ್ತು ಉಪಾದಾನಕಾರಣವೂ ಆಗಿದೆಯೆಂದು ಚಿದಚಿದ್ ವಿಶಿಷ್ಟವಾದ ಬ್ರಹ್ಮವು ಒಂದೇ ಎಂದೂ, ಮೋಕ್ಷದಲ್ಲಿ ಎಲ್ಲರೂ ಪರಮಾತ್ಮನ ಸಾರೂಪ್ಯವನ್ನು ಹೊಂದುವರೆಂದೂ ಎಲ್ಲರಿಗೂ ಮೋಕ್ಷವಿದೆ ಎಂದೂ ತಿಳಿಸಿದ್ದಾರೆ. ಜೀವ ಬ್ರಹ್ಮರಿಗೆ ಐಕ್ಯವು ಸರ್ವಥಾ ಇಲ್ಲ, ಜಗತ್ತು ಸತ್ಯವೇ ಹೊರತು ಸರ್ವಥಾ ಮಾಯಾ ನಿರ್ಮಿತವಲ್ಲ, ವಿಷ್ಣುವೇ ಸರ್ವೋತ್ತಮನು ಇತ್ಯಾದಿ ತತ್ವಗಳು ರಾಮಾನುಜಮತದ ಭಾಷ್ಯಗಳಲ್ಲಿ ಕಂಡುಬರುತ್ತವೆ. ಶ್ರೀ ಮಧ್ವಾಚಾರ್ಯರು ಅದ್ವೈತ ವಿಶಿಷ್ಟಾದ್ವೈತ ಮತ್ತು ಇತರ ಎಲ್ಲಾ ಮತಗಳ ವಾದಗಳನ್ನೂ ಖಂಡಿಸಿ, ಶ್ರೀಹರಿಯೇ ಸರ್ವೋತ್ತಮನು, ಜೀವರು ಮುಕ್ತಾಮುಕ್ತಾವಸ್ಥೆಗಳಲ್ಲಿಯೂ ಸರ್ವದಾ ಹರಿಯ ಅಧೀನರು. ಅವನಿಂದಲೇ ಪ್ರತಿಕ್ಷಣ-ದಲ್ಲಿಯೂ ಪ್ರೇರಿಸಲ್ಪಡುತ್ತಾರೆ. ಜಗತ್ತು ಸತ್ಯ. ಸಾತ್ವಿಕ ರಾಜಸ ತಾಮಸ ಎಂಬುದಾಗಿ ಜೀವರು ಮೂರು ವಿಧವಾಗಿರುತ್ತಾರೆ. ಇವರಲ್ಲಿ ಸಾತ್ತ್ವಿಕರು ಮಾತ್ರವೇ ಮೋಕ್ಷವನ್ನು ಹೊಂದುತ್ತಾರೆ. ರಾಜಸರು ಸ್ವರ್ಗ ನರಕ ಮತ್ತು ಭೂಲೋಕ ಇವುಗಳಲ್ಲಿ ಓಡಾಡುತ್ತಾ ಇರುತ್ತಾರೆ. ತಾಮಸರು ಹರಿದ್ವೇಷವನ್ನೇ ಮಾಡುತ್ತಾ ಸ್ವರ್ಗ ಭೂಮಿ ಇವುಗಳಲ್ಲಿ ಓಡಾಡುತ್ತಾ ಕೊನೆಗೆ ಹರಿದ್ವೇಷದ ಫಲವಾಗಿ ಅಂಧತಮಸ್ಸೆಂಬ ನಿತ್ಯನರಕವನ್ನೇ ಶಾಶ್ವತವಾಗಿ ಹೊಂದುತ್ತಾರೆ. ಉಪನಿಷತ್ತುಗಳಲ್ಲಿ ಮೇಲ್ನೋಟಕ್ಕೆ ಅದ್ವೈತವನ್ನೂ ಜಗತ್ತಿನ ಮಿಥ್ಯಾತ್ವವನ್ನೂ ಹೇಳುವಂತೆ ಕಾಣಿಸುವ ಮಂತ್ರಗಳು ಕಂಡುಬಂದರೂ ಅವುಗಳಿಗೆ ಯಥಾರ್ಥವಾಗಿ ಆ ಅರ್ಥವಲ್ಲ, ಬೇರೆ ಅರ್ಥವನ್ನು ಉಪಕ್ರಮಾದಿತಾತ್ಪರ್ಯಲಿಂಗಗಳಿಂದ ವಿಚಾರ ಮಾಡಿ ತಿಳಿಯ-ಬೇಕು. ವೇದದ ಮಂತ್ರ ಬ್ರಾಹ್ಮಣ ಆರಣ್ಯಕ ಭಾಗಗಳಲ್ಲಿ ಮಾತ್ರ ಜಗತ್ತು ಅಸತ್ಯವೆಂದಾಗಲಿ, ಜೀವ ಬ್ರಹ್ಮರಿಗೆ ಐಕ್ಯವಿದೆ ಎಂದಾಗಲಿ ಎಲ್ಲೂ ಹೇಳಲಿಲ್ಲ.

ಅದ್ವೈತಿಗಳು ಮಹಾವಾಕ್ಯಗಳು ಎಂದು ಹೇಳುವ ಅಹಂ ಬ್ರಹ್ಮಾಸ್ಮಿ ತತ್ತ್ವಮಸಿ ಸೋಽಹಮಸ್ಮಿ , ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ವಾಕ್ಯಗಳೆಲ್ಲವೂ ಉಪನಿಷತ್ತುಗಳಲ್ಲಿ ಸಿಗುತ್ತವೆ. ಸಂಹಿತೆ ಬ್ರಾಹ್ಮಣಗಳಲ್ಲಿ ಸಿಗುವುದಿಲ್ಲ. ಇವುಗಳು ಅಪ್ರಮಾಣಗಳೆಂದೂ ಸಂಹಿತೆಗಳಿಗಿಂತ ಇವುಗಳ ಪ್ರಾಮಾಣ್ಯವು ಕಡಿಮೆ ಎಂದೂ ನಾವು ಹೇಳುವುದಿಲ್ಲ. ಆದರೆ ಅದ್ವೈತವೇ ಸಮಸ್ತ ವೇದಗಳ ತಾತ್ಪರ್ಯ ವಿಷಯವಾಗಿದ್ದರೆ, ವೇದದ ಎಲ್ಲಾ ಭಾಗಗಳಲ್ಲಿಯೂ ಸ್ವಲ್ಪ ಸ್ವಲ್ಪವಾದರೂ ಪ್ರತಿಪಾದಿತವಾಗಬೇಕಿತ್ತು. ಹಾಗಿಲ್ಲದೆ ಸಂಹಿತೆಯಲ್ಲಿ ದ್ವೈತವನ್ನು ಉಪನಿಷತ್ತಿನಲ್ಲಿ ಅದ್ವೈತವನ್ನು ಬೋಧಿಸಿದರೆ ವೇದವು ಉನ್ಮತ್ತ ಪ್ರಲಾಪವೆಂದು ತೋರಬಹುದೇ ಹೊರತು ಪ್ರಮಾಣವೆನಿಸಲಾರದು. ವೇದಗಳಿಗೂ ಉಪನಿಷತ್ತುಗಳಿಗೂ ನಾವು ಏಕವಾಕ್ಯತೆಯನ್ನು ಹೇಳಬೇಕು.

**ವಿರೋಧೇ ವಾಕ್ಯಯೋರ್ಯತ್ರ ನಾಪ್ರಾಮಾಣ್ಯಂ ತದೇಷ್ಯತೇ ।**
**ಯಥಾ ವಿರುದ್ಧತಾ ನ ಸ್ಯಾತ್ ತಥಾರ್ಥಃ ಕಲ್ಪ್ಯ ಏತಯೋಃ ॥**

ವೇದವಾಕ್ಯಗಳಿಗೆ ಪರಸ್ಪರ ವಿರೋಧ ಬಂದರೆ ಅವುಗಳನ್ನು ಅಪ್ರಮಾಣವೆಂದು ಹೇಳಬಾರದು, ಅವುಗಳಿಗೆ ವಿರೋಧ ಬಾರದಂತೆ ಅರ್ಥವನ್ನು ನಿರ್ಧರಿಸಬೇಕು ಎಂದು ಆಚಾರ್ಯರು ಬ್ರಹ್ಮಸೂತ್ರ ಭಾಷ್ಯದಲ್ಲಿ ಕೂರ್ಮಪುರಾಣ ವಾಕ್ಯವನ್ನು ಉದಾಹರಿಸಿ ತೋರಿಸಿರುತ್ತಾರೆ ಮತ್ತು ಸಂದಿಗ್ಧವಾದ ವಿಪರೀತವಾದ ಅರ್ಥಗಳನ್ನು ತಿಳಿಸುವಂತೆ ತೋರುವ ವಾಕ್ಯಗಳಿಗೆ ಉಪಕ್ರಮೋಪಸಂಹಾರಾದಿಲಿಂಗಗಳಿಂದ ಸರಿಯಾದ ಅರ್ಥವನ್ನು ನಿರ್ಧರಿಸಬೇಕೆಂದು ಆಚಾರ್ಯರು ತಿಳಿಸಿರುತ್ತಾರೆ. ಶ್ರೀ ಮಧ್ವಾಚಾರ್ಯರ ಭಾಷ್ಯ ರಚನೆಯ ರೀತಿಗೂ ಇತರ ಭಾಷ್ಯಕಾರರ ರಚನಾಕ್ರಮಕ್ಕೂ ಬಹಳ ವ್ಯತ್ಯಾಸವಿದೆ. ಆಚಾರ್ಯರು ಹೇಳುವ ಎಲ್ಲಾ ಅರ್ಥಗಳಿಗೂ ಅವರು ಪ್ರಮಾಣಗಳನ್ನು ಕೊಟ್ಟಿರುತ್ತಾರೆ. ಆಚಾರ್ಯರ ಸ್ವಂತ ವಾಕ್ಯಗಳು ಬಹಳ ಕಡಿಮೆ.

Rarest Archiver

ತವಲಕಾರ ಭಾಷ್ಯದ ಕೊನೆಯ ನಾಲ್ಕು ಪಂಕ್ತಿಗಳನ್ನು ಬಿಟ್ಟರೆ ಮಿಕ್ಕ ಎಲ್ಲ ಪ್ರಮಾಣಗಳು ಬ್ರಹ್ಮಸಾರವೆಂಬ ಗ್ರಂಥದಿಂದ ಉದ್ಧೃತವಾದ ವಾಕ್ಯಗಳು. ಹಾಗೆಯೇ ಐತರೇಯ ಭಾಷ್ಯದಲ್ಲಿ ಐತರೇಯಸಂಹಿತಾ, ಋಕ್‌ಸಂಹಿತಾ ಇವುಗಳಿಂದ ಅನೇಕ ಪ್ರಮಾಣಗಳು ಉದ್ಧೃತವಾಗಿವೆ. ಇದೆಲ್ಲವನ್ನೂ ನೋಡಿದಾಗ ಶ್ರೀ ಮಧ್ವಾಚಾರ್ಯರು ತಿಳಿಸಿರುವ ದೇವತಾ ತಾರತಮ್ಯ ಜ್ಞಾನಪೂರ್ವಕವಾದ ಜೀವೇಶ್ವರಭೇದಭಾವವು ಬಹಳ ಹಿಂದಿನಿಂದಲೇ ಇದ್ದಿತೆಂದು ನಿಶ್ಚಯವಾಗುತ್ತದೆ. ದ್ವೈತವು ಮಾತ್ರವಲ್ಲ, ಅದ್ವೈತವೂ ಕೂಡ ಪ್ರಾಚೀನಮತವೇ ಆಗಿದೆ. ಆದರೆ ವೇದವ್ಯಾಸರಿಗೆ ಸಮ್ಮತವಾದುದು ಹರಿಸರ್ವೋ-ತ್ತಮತ್ವವನ್ನು ತಿಳಿಸುವ ಬ್ರಹ್ಮಸೂತ್ರಾನುಸಾರಿಯಾದ ದ್ವೈತವಾದವು ಒಂದೇ ಆಗಿದೆ. ಬ್ರಹ್ಮಸೂತ್ರಗಳಲ್ಲಿ ಅದ್ವೈತವಾದವು ಎಲ್ಲಿಯೂ ಪ್ರತಿಪಾದಿತವಾಗಲಿಲ್ಲವೆಂದು ಪಾಶ್ಚಾತ್ಯ ವಿದ್ವಾಂಸರೂ ಸಹ ಒಪ್ಪಿರುತ್ತಾರೆ. ಉಪನಿಷತ್ತುಗಳಲ್ಲಿ ಮೇಲ್ನೋಟಕ್ಕೆ ಅದ್ವೈತವು ತೋರಿದರೂ ಅದರ ಅಂತರಾರ್ಥ ತಾತ್ಪರ್ಯ ಬೇರೆಯೇ ಇದೆ.

ಎಲ್ಲಾ ಉಪನಿಷತ್ತುಗಳೂ ಪರಮಚೇತನನಾದ ಪರಬ್ರಹ್ಮನ ಬೇರೆ ಬೇರೆ ಧರ್ಮಗಳನ್ನೂ ಗುಣಗಳನ್ನೂ ತಿಳಿಸುವುದಕ್ಕಾಗಿ ಪ್ರವೃತ್ತವಾಗಿವೆ. ಅದೇ ಉಪನಿಷತ್ತುಗಳ ಮುಖ್ಯೋದ್ದೇಶವೆಂದು ತಿಳಿದು ಬರುತ್ತದೆ. ಹೇಗೆಂದರೆ ಈಶಾವಾಸ್ಯೋಪನಿಷತ್ತಿನಲ್ಲಿ ಪರಬ್ರಹ್ಮನು ಸರ್ವವ್ಯಾಪಿಯು ಸರ್ವಾಂತರ್ಯಾಮಿಯು ಸರ್ವಜಗತ್ ಪ್ರವರ್ತಕನು ಸರ್ವಸೃಷ್ಟಿಕರ್ತನು, ಸರ್ವಸಂಹಾರಕನು, ಸರ್ವಜ್ಞನು ಎಂದು ಬೋಧಿಸಲ್ಪಟ್ಟಿದೆ. ತಲವಕಾರೋಪನಿಷತ್ತಿನಲ್ಲಿ ಪರಮಾತ್ಮನು ನಮ್ಮ ಇಂದ್ರಿಯಾದಿಗಳಲ್ಲಿದ್ದು ಸರ್ವವ್ಯಾಪಾರಗಳನ್ನು ನಡೆಸುತ್ತಾನೆ. ಇಂದ್ರಿಯಗಳಿಗೂ ಅವುಗಳ ಅಭಿಮಾನಿ ದೇವತೆ-ಗಳಿಗೂ ಪ್ರೇರಕನಾಗಿರುತ್ತಾನೆ ಎಂದು ಬೋಧಿತವಾಗಿದೆ. ಕಾಠಕೋಪನಿಷತ್ತಿನಲ್ಲಿ ಪರಮಾತ್ಮನು ಸಾಂಸಾರಿಕ ಜೀವರಿಗೂ ಮತ್ತು ಮುಕ್ತರಿಗೂ ನಿಯಾಮಕನಾಗಿ ಯಾವಾಗಲೂ ಅವರಿಂದ ಪ್ರಶಂಸಿಸಲ್ಪಡುತ್ತಾನೆ, ಅವರಿಂದ ಭಿನ್ನನಾಗಿದ್ದಾನೆ ಎಂದು ತಿಳಿಸಲ್ಪಟ್ಟಿದೆ. ಮಾಂಡೂಕೋಪನಿಷತ್ತಿನಲ್ಲಿ ಓಂಕಾರ ಪ್ರತಿಪಾದ್ಯನಾದ ಪರಮಾತ್ಮನು ನಾಲ್ಕು ರೂಪಗಳಿಂದ ಜೀವಾತ್ಮನ ನಾಲ್ಕು ಅವಸ್ಥೆಗಳಿಗೆ ಪ್ರೇರಕನೂ ಮತ್ತು ರಕ್ಷಕನೂ ಆಗಿದ್ದಾನೆ ಎಂದು ಪ್ರತಿಪಾದಿತವಾಗಿದೆ. ಹೀಗೆ ಒಂದೊಂದು ಉಪನಿಷತ್ತಿನಲ್ಲಿ ಹಲವಾರು ವಿಶೇಷಾಂಶಗಳು ತಿಳಿಸಲ್ಪಟ್ಟಿವೆ. ಬ್ರಹ್ಮಜ್ಞಾನವನ್ನು ಬಯಸುವ ಅಧಿಕಾರಿಗೆ ವೈರಾಗ್ಯವು ಪ್ರಥಮ ಸೋಪಾನವೆಂದು ಈಶಾವಾಸ್ಯದ ಒಂದನೇ ಮಂತ್ರದಲ್ಲಿ ಬೋಧಿತವಾಗಿದೆ. ಹಾಗೆಯೇ ಕಠೋಪನಿಷತ್ತಿನಲ್ಲಿಯೂ ಯಮದೇವನು ನಚಿಕೇತನಿಗೆ ಬ್ರಹ್ಮಜ್ಞಾನೋಪದೇಶವನ್ನು ಮಾಡುವುದಕ್ಕಿಂತ ಮೊದಲು ನಚಿಕೇತನ ವೈರಾಗ್ಯ ಪರೀಕ್ಷೆಯನ್ನು ಮಾಡುತ್ತಾನೆ ಮತ್ತು ಬ್ರಹ್ಮಜ್ಞಾನವು ಸದ್ಗುರುವಿನ ಉಪದೇಶವಿಲ್ಲದೆ ಉಂಟಾಗುವುದಿಲ್ಲ ಎಂದು ಹೇಳುತ್ತಾರೆ. ಗುರುವಿಗೆ ಸಂಪೂರ್ಣವಾಗಿ ತನ್ನನ್ನು ಸಮರ್ಪಿಸದ ಹೊರತು ಮುಕ್ತಿಯು ಉಂಟಾಗುವುದಿಲ್ಲ ಎಂದು ತಿಳಿದುಬರುತ್ತದೆ.

ಭಾರದ್ವಾಜ, ಸುಕೇಶ ಮುಂತಾದ ಆರು ಮಂದಿ ಋಷಿಕುಮಾರರು ಪಿಪ್ಪಲಾದ ಋಷಿಗಳಲ್ಲಿ ಒಂದು ವರ್ಷ ಗುರುಕುಲವಾಸ ಮಾಡುತ್ತ ಬ್ರಹ್ಮ ಚರ್ಯಾನುಷ್ಠಾನ ಮಾಡಿದ ಮೇಲೆ ಅವರಿಗೆ ಗುರುಗಳ ಮೂಲಕ ಬ್ರಹ್ಮಜ್ಞಾನೋ-ಪದೇಶವಾಯಿತು. ಶ್ವೇತಕೇತುವಿನ ತಂದೆಯಾದ ಉದ್ದಾಲಕರು ಗೃಹಸ್ಥಾಶ್ರಮಿಯಾದ ಬ್ರಾಹ್ಮಣ ಋಷಿಗಳಾದರೂ ಪ್ರವಾಹಣ ಜಾಬಾಲಿ ಎಂಬ ಕ್ಷತ್ರಿಯ ರಾಜನಿಂದ ಉಪದೇಶ ಪಡೆದರು ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿ ವರ್ಣಿತವಾಗಿದೆ. ಹಾಗೆಯೇ ಬ್ರಹ್ಮಜ್ಞಾನವು ಒಮ್ಮಿಂದೊಮ್ಮೆಯೇ ಉತ್ಪನ್ನವಾಗುವುದಿಲ್ಲ, ಸಂಶಯ ಬಂದಾಗ ಗುರುಗಳ ಬಳಿಗೆ ಹೋಗಿ ಅದನ್ನು ನಿವಾರಿಸಿಕೊಳ್ಳಬೇಕು. ವರುಣ ಪುತ್ರರಾದ ಭೃಗುಋಷಿಗಳು ಅನೇಕಬಾರಿ ತಂದೆಯಿಂದ ಉಪದೇಶವನ್ನು ಕೇಳಿ ಸಂಶಯ ನಿವೃತ್ತಿ ಮಾಡಿಕೊಂಡರೆಂದು ತೈತ್ತಿರೀಯೋಪನಿಷತ್ತಿನಲ್ಲಿ ಸ್ಪಷ್ಟವಾಗಿದೆ ಹಾಗೆಯೇ ಯೋಗ್ಯರಾದ ಅಧಿಕಾರಿಗಳಿಗೆ ಮಾತ್ರವೇ ಬ್ರಹ್ಮಜ್ಞಾನವುಂಟಾಗಿರುತ್ತದೆ. ಇಂದ್ರ ಮತ್ತು ವಿರೋಚನರು ಬ್ರಹ್ಮದೇವರಿಂದ

Rarest Archiver

ಉಪದೇಶ ಪಡೆದರು. ಆದರೆ ಇಂದ್ರನಿಗೆ ಮಾತ್ರವೇ ಸಮ್ಯಗ್ ಜ್ಞಾನವು ಉಂಟಾಯಿತು; ವಿರೋಚನನು ವಿಪರೀತ-ಜ್ಞಾನವನ್ನು ಹೊಂದಿದನು ಎಂಬ ವಿಷಯವು ಛಾಂದೋಗ್ಯ ಉಪನಿಷತ್ತಿನಿಂದ ತಿಳಿದು ಬರುತ್ತದೆ.

ಪರಮಾತ್ಮನು ಸಕಲಕಲ್ಯಾಣ ಗುಣಪೂರ್ಣನು, ಸಮಸ್ತದೋಷ ರಹಿತನು, ಸರ್ವಂತಂತ್ರಸ್ವತಂತ್ರನು, ಸರ್ವಶಕ್ತನು, ಕೇವಲ ಆನಂದಜ್ಞಾನಗಳೇ ದೇಹವಾಗಿ ಉಳ್ಳವನು. ಮುಕ್ತಾತ್ಮರಿಂದಲೂ ಸರ್ವದಾ ಪೂಜ್ಯನು, ಸಮಾಧಿಕರಹಿತನು - ಇವುಗಳೇ ಎಲ್ಲಾ ಉಪನಿಷತ್ತುಗಳ ಪರಮತಾತ್ಪರ್ಯ ವಿಷಯಗಳು. ಇಂತಹ ಪರಮಾತ್ಮನು ತನ್ನ ಇಚ್ಛಾಮಾತ್ರದಿಂದಲೇ ಕೇವಲ ಲೀಲೆಯಿಂದಲೇ ಜಗತ್ತನ್ನು ಸೃಜಿಸಿದ್ದಾನೆ. ಪರಮಾತ್ಮನು ಪ್ರಪಂಚಕ್ಕೆ ನಿಮಿತ್ತಕಾರಣನು, ಚಿತ್‌ಪ್ರಕೃತಿ ಎಂಬ ಹೆಸರಿನಿಂದ ಕರೆಯಲ್ಪಡುವ ಲಕ್ಷ್ಮೀದೇವಿಯಿಂದ ಅಭಿಮನ್ಯಮಾನವಾದ ಜಡ ಪ್ರಕೃತಿಯೆಂಬ ಉಪಾದಾನ ಕಾರಣದಿಂದ ಮಡಿಕೆಯು ಮಣ್ಣಿನಿಂದ, ಬಟ್ಟೆಯು ದಾರದಿಂದಾದಂತೆ ಜಗತ್ತು ನಿರ್ಮಿತವಾಗಿದೆ. ಅಕ್ಕಿಗೆ ಹೊಟ್ಟು ಇರುವಂತೆ ಅನಾದಿಯಾದ ಅವಿದ್ಯಾಕಾಮ ಕರ್ಮಾದಿಗಳಿಂದ ಲಿಂಗದೇಹದಿಂದ ಎಲ್ಲಾ ಜೀವರೂ ಪರಮಾತ್ಮನ ಸ್ವತಂತ್ರವಾದ ಇಚ್ಛೆಯಿಂದ ಬದ್ಧರಾಗಿರುತ್ತಾರೆ. ವೈರಾಗ್ಯ ಭಕ್ತಿ ಶ್ರವಣ ಮನನ ಉಪಾಸನೆಗಳಿಂದ ಪರಮಾತ್ಮನನ್ನು ಬಹುಕಾಲ ಆರಾಧಿಸಿದರೆ ಜೀವರಲ್ಲಿ ಯೋಗ್ಯರಾದ ಸಾತ್ವಿಕರಿಗೆ ಪರಮಾತ್ಮನ ಅಪರೋಕ್ಷಜ್ಞಾನ ಉಂಟಾಗುತ್ತದೆ ಅವನು ಪ್ರಸನ್ನನಾಗುತ್ತಾನೆ. ಅವನ ಪರಮಪ್ರಸಾದದಿಂದ ಮುಕ್ತಿಯುಂಟಾಗುತ್ತದೆ. ಪರಮಾತ್ಮನ ನಿಯಮಗಳನ್ನು ಅತಿಕ್ರಮಿಸಲು ಯಾರಿಗೂ ಸಾಧ್ಯವಾಗುವುದಿಲ್ಲ. ಕಾಣಿಸುವ ಜಗತ್ತು ಸುಳ್ಳೋ ಸತ್ಯವೋ ಎಂದು ಅದ್ವೈತಿ ದ್ವೈತಿಗಳಲ್ಲಿ ಜಿಜ್ಞಾಸೆಯಿದ್ದರೂ ಉಪನಿಷತ್ತುಗಳು ಮಾತ್ರ ಸಾರಾಸಗಟಾಗಿ ಪ್ರಪಂಚವು ಸತ್ಯವೆಂದೇ ಸಾರುತ್ತವೆ. ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ ಎಂಬ ಈಶಾವಾಸ್ಯದ ಮಂತ್ರವು ಪ್ರಪಂಚವು ಅನಾದ್ಯನಂತಕಾಲದವರೆಗೂ ಸತ್ಯವೆಂದು ಘೋಷಿಸುತ್ತದೆ. ಷಟ್ ಪ್ರಶ್ನೋಪನಿಷತ್ತಿನಲ್ಲಿ ಸೃಷ್ಟಿಕ್ರಮವು ವರ್ಣಿತವಾಗಿದೆ. ಎಲ್ಲಿಯೂ ಸೃಷ್ಟಿಯು ಐಂದ್ರಜಾಲಿಕನು ಮಾಯೆಯಿಂದ ವಸ್ತುಗಳನ್ನು ನಿರ್ಮಿಸುವಂತೆ ಪರಮಾತ್ಮನು ಮಾಯೆಯಿಂದ ಸುಳ್ಳಾದ ಪದಾರ್ಥಗಳನ್ನು ನಿರ್ಮಿಸುತ್ತಾನೆ ಎಂದು ಹೇಳಲಿಲ್ಲ. ನದಿಗಳು ಸಮುದ್ರವನ್ನು ಸೇರಿ ನಾಮ ರೂಪಗಳ ಅಸ್ತಮಯವಾಗುತ್ತದೆ ಎಂಬುದು ಜೀವಬ್ರಹ್ಮೈಕ್ಯಕ್ಕೆ ಮೇಲ್ನೋಟಕ್ಕೆ ಉದಾಹರಣೆಯಾಗಬಹುದೇ ಹೊರತು ಪ್ರಪಂಚಮಿಥ್ಯಾತ್ವಕ್ಕೆ ಉದಾಹರಣೆಯಾಗಲಾರದು. ಆದರೆ ನದೀ ಸಮುದ್ರ ಸಮಾಗಮದಿಂದ ಸಮುದ್ರದಲ್ಲಿ ವೃದ್ಧಿ ಕಾಣಿಸುವುದು ಮೊದಲಾದ ವಿರುದ್ಧಧರ್ಮಗಳು ಕಂಡುಬರುವುದರಿಂದ ಇದೂ ಐಕ್ಯಕ್ಕೆ ಉದಾಹರಣೆಯಾಗುವುದಿಲ್ಲ. ಅಥರ್ವಣ ಉಪನಿಷತ್ತಿನಲ್ಲಿ ಹೇಳಿದ ಜೇಡರ ಹುಳದ ದೃಷ್ಟಾಂತವೂ ಪರಿಣಾಮವಾದಕ್ಕೆ ಕಿಂಚಿತ್ ದೃಷ್ಟಾಂತವಾಗಬಹುದು. ಐಕ್ಯಕ್ಕೆ ದೃಷ್ಟಾಂತವಲ್ಲ. ಬ್ರಹ್ಮವು ಪ್ರಪಂಚರೂಪದಿಂದ ಪರಿಣಾಮ ಹೊಂದುತ್ತದೆ ಎಂಬ ವಾದವು ನಿರ್ವಿಕಾರ ಅಕ್ಷರಶುದ್ಧ ಎಂದು ಹೊಗಳಲ್ಪಡುವ ಯಾವ ವಿಧವಾದ ಅತ್ಯಲ್ಪವಾದ ವಿಕಾರಕ್ಕೂ ಒಳಗಾಗದಿರುವ ಪರಬ್ರಹ್ಮನಿಗೆ ಸರ್ವಥಾ ಕೂಡಲಾರದು. ಮಾಂಡೂಕ್ಯ ಉಪನಿಷತ್ತಿನಲ್ಲಿ ಮಾಯಾ ಎಂಬ ಪದವಿದ್ದರೂ ಆ ಉಪನಿಷತ್ತಿನ ಕಾರಿಕೆಗಳೆಲ್ಲವೂ ಗೌಡಪಾದರ ಕಾರಿಕೆಗಳು ಎಂದು ಅದ್ವೈತಿಗಳು ಹೇಳುವುದರಿಂದ ಜಗತ್ತು ಮಿಥ್ಯಾ ಎಂಬ ವಿಷಯಕ್ಕೆ ಅನ್ಯರಿಗೆ ಶ್ರುತಿ ಪ್ರಮಾಣವಿಲ್ಲವೆಂದು ಸಿದ್ಧವಾಗುತ್ತದೆ. ಆದರೆ ಅಲ್ಲಿ ಬರುವ ಕಾರಿಕೆಗಳೆಲ್ಲಾ ಮಂಡೂಕರೂಪಿಯಾದ ವರುಣನಿಂದ ದೃಷ್ಟವಾದ ಶ್ರುತಿಗಳೆಂದೇ ಹೇಳಿ ಆಚಾರ್ಯರು ಅವುಗಳಿಗೆ ಸರಿಯಾದ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಜಗತ್ತು ಸತ್ಯವೆಂದು ಸಾಧಿಸುವವರಿಗೆ ಅನೇಕ ಪ್ರಮಾಣಗಳಿವೆ ಸರ್ವಂ ಖಲ್ವಿದಂ ಬ್ರಹ್ಮ ಎಂಬ ಛಾಂದೋಗ್ಯ ವಾಕ್ಯವೂ ಕೂಡ ಮೇಲ್ನೋಟಕ್ಕೆ ಪರಿಣಾಮವಾದಕ್ಕೆ ಅನುಕೂಲವಾಗಬಹುದೇ ಹೊರತು ವಿವರ್ತವಾದಕ್ಕಾಗಲಿ ಜೀವೇಶ್ವರಐಕ್ಯವಾದಕ್ಕಾಗಲೀ ಉಪಯೋಗವಾಗುವುದಿಲ್ಲ. ಅಹಂ ಬ್ರಹ್ಮಾಸ್ಮಿ , ತತ್ತ್ವಮಸಿ ಇಂತಹ ವಾಕ್ಯಗಳೂ ಕೂಡ ಉಪಕ್ರಮ ಉಪಸಂಹಾರ ಮುಂತಾದವುಗಳ ಮೂಲಕ ತಾತ್ಪರ್ಯವನ್ನು ನಿರ್ಣಯಿಸಲು ಹೊರಟಾಗ

Rarest Archiver

ಅದ್ವೈತಕ್ಕೆ ಪ್ರಮಾಣವಾಗುವುದಿಲ್ಲ. ಈಶಾವಾಸ್ಯ ಉಪನಿಷತ್ತಿನಲ್ಲಿ ಯೋಽಸಾವಸೌ ಪುರುಷಃ ಸೋಽಹಮಸ್ಮಿ, ಕಾಠಕದಲ್ಲಿ ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ, ಏಕೋ ವಶೀ ಸರ್ವಭೂತಾಂತರಾತ್ಮಾ, ಏಕಂ ರೂಪಂ ಬಹುಧಾ ಯಃ ಕರೋತಿ, ಅಥರ್ವಣದಲ್ಲಿ ಪರೇಽವ್ಯಯೇ ಸರ್ವ ಏಕೀಭವಂತಿ, ಬ್ರಹ್ಮೈವ ಭವತಿ ಇತ್ಯಾದಿ ವಾಕ್ಯಗಳು ಕಂಡು ಬರುತ್ತವೆ. ಪೂರ್ವಾಪರ ವಿರೋಧ ಬಾರದಂತೆ ಇವುಗಳಿಗೆ ಅರ್ಥವನ್ನು ಮಾಡುವಾಗ ಇತರ ಪ್ರಮಾಣಗಳಿಂದ ಅವುಗಳಿಗೆ ದ್ವೈತಪರವಾಗಿ ಅರ್ಥವನ್ನು ಮಾಡಲು ಬರುತ್ತದೆ. ದ್ವಾಸುಪರ್ಣಾ ಸಯುಜಾ ಸಖಾಯಾ, ನಿರಂಜನಃ ಪರಮಂ ಸಾಮ್ಯಮುಪೈತಿ ಇತ್ಯಾದಿ ವಾಕ್ಯಗಳಿಗೆ ಅಭೇದಪರವಾಗಿ ಅರ್ಥವನ್ನು ಮಾಡಲು ಸಾಧ್ಯವಿಲ್ಲ. ಆದುದರಿಂದ ಉಪನಿಷತ್ತುಗಳಿಗೆ ಭೇದಪರವಾಗಿಯೇ ಅರ್ಥವನ್ನು ಮಾಡಬೇಕು. ಎಂದೂ ಪ್ರತ್ಯಕ್ಷ ಅನುಮಾನ ಶ್ರುತಿ ಸ್ಮೃತಿ ಸಾಕ್ಷಿ ಅನುಭವಗಳಿಗೆ ವಿರುದ್ಧವಾದ ಸೋಽಹಂ ಎಂಬ ಉಪಾಸನೆಯನ್ನು ಮಾಡಬಾರದು. ದಾಸೋಽಹಂ ಎಂದು ಪರಮಾತ್ಮನ ಗುಣಾತಿಶಯಗಳನ್ನು ಕೊಂಡಾಡಬೇಕು.

**'ಅತೋ ಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ । ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥'** ಎಂದು ಆಚಾರ್ಯರು ಹೇಳಿದಂತೆ, ಸಮಸ್ತಗುಣಗಳ ಉನ್ನಾಹ ಅಂದರೆ ಒಂದರ ಮೇಲೊಂದು ಉಕ್ಕಿಬರುವಿಕೆ ಎಲ್ಲಿ ಇದೆಯೊ, ಎಲ್ಲಿ ಯಾವ ದೋಷಗಳಿಗೂ ಯಾವ ರೀತಿಯಿಂದಲೂ ಅವಕಾಶವಿಲ್ಲವೊ ಅವನೇ ಪರಬ್ರಹ್ಮನು; ಅವನನ್ನೇ ಎಲ್ಲರೂ ಒಂದು ಕ್ಷಣವೂ ಬಿಡದೆ ಉಪಾಸಿಸಬೇಕು ಎಂಬುದೇ ಉಪನಿಷತ್ತುಗಳ ಪರಮ ಸಂದೇಶವು.

### ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಈಶಾವಾಸ್ಯೋಪನಿಷತ್ ಖಂಡಾರ್ಥಃ

**॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ॥**

**ಶ್ರೀಪ್ರಾಣಪತಿಮಾನಮ್ಯ ಪೂರ್ಣಬೋಧಾದಿದೇಶಿಕಾನ್ ।**
**ಈಶಾವಾಸ್ಯೋಪನಿಷದಃ ಕರಿಷ್ಯಾಮ್ಯರ್ಥಸಂಗ್ರಹಮ್ ॥**

ವಿಶಿಷ್ಟಜ್ಞಾನಸಂಪನ್ನರಾದ ಹನುಮಂತ ಭೀಮಸೇನ ಮಧ್ವರ ಅಂತರ್ಯಾಮಿಯಾಗಿರುವ ರಾಮಕೃಷ್ಣವೇದವ್ಯಾಸಾಭಿನ್ನನಾದ ಲಕ್ಷ್ಮೀಸಮೇತನಾದ ಹಯಗ್ರೀವದೇವರಿಗೆ ನಮಸ್ಕಾರಗಳು.

ಲಕ್ಷ್ಮೀದೇವಿಗೂ ಪ್ರಾಣದೇವರಿಗೂ ವಲ್ಲಭನಾದ, ಲಕ್ಷ್ಮೀದೇವಿಗೆ ವಿಶೇಷವಾಗಿ ಪ್ರಾಣವಲ್ಲಭನಾದ ಶ್ರೀಮನ್‌ನಾರಾಯಣನನ್ನು ಆನಂದತೀರ್ಥರೇ ಮೊದಲಾದ ಗುರುಗಳನ್ನೂ ಭಕ್ತಿಶ್ರದ್ಧಾಪೂರ್ವಕವಾಗಿ ನಮಸ್ಕರಿಸಿ (ನಾನು - ಶ್ರೀರಾಘವೇಂದ್ರತೀರ್ಥನೆಂಬ ಯತಿಯು), ಈಶಾವಾಸ್ಯ ಉಪನಿಷತ್ತಿನ ಅರ್ಥಸಂಗ್ರಹವನ್ನು ಮಾಡುವೆನು.

**ಈಶಾವಾಸ್ಯಮಿದಂ ಸರ್ವಂ ಯತ್ ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಸ್ವಿದ್ ಧನಮ್ ॥ 1 ॥**

Rarest Archiver

**ಅಸ್ಯಾ ಉಪನಿಷದಃ ಸ್ವಾಯಂಭುವೋ ಮನುಃ ಋಷಿಃ । ಯಜ್ಞನಾಮಾ ಹರಿಃ ದೇವತಾ । ಅನುಷ್ಟುಬಾದಿ ಯಥಾಯೋಗ್ಯಂ ಛಂದೋ ಜ್ಞೇಯಮ್ । ಅನೇಜದಿತ್ಯಾದಿನಾ ತತ್ತ್ವಂ ವಿವಕ್ಷುಃ ಉಪದಿಷ್ಟಂ ತತ್ತ್ವಂ ಅಧಿಕಾರಿಣಿ ಏವ ಹೃದ್ಯವತಿಷ್ಠತೇ ನಾನ್ಯಸ್ಯೇತಿ ಏತದುಪನಿಷದಧಿಕಾರಸಿದ್ಧ್ಯರ್ಥಂ ವಿಚ್ಛಿನ್ನವಿಷಯತೃಷ್ಣತ್ವಂ ತಾವದಾದ್ಯೇನ ಮಂತ್ರೇಣ ಸಯುಕ್ತಿಕಂ ವಿಧತ್ತೇ ಈಶೇತಿ ।**

ಈಶಾವಾಸ್ಯೋಪನಿಷತ್ತಿಗೆ ಸ್ವಾಯಂಭುವ ಮನುವೇ ಋಷಿಯು, ಯಜ್ಞ ಎಂಬ ಹೆಸರುಳ್ಳ ಹರಿಯೇ ದೇವತೆಯು. ಅನುಷ್ಟುಪ್ ಮುಂತಾದ ಛಂದಸ್ಸುಗಳನ್ನು ಯಥಾಯೋಗ್ಯವಾಗಿ ತಿಳಿಯಬೇಕು.

ಅನೇಜದೇಕಂ ಮನಸೋ ಜವೀಯಃ ಎಂಬ ನಾಲ್ಕನೆಯ ಮಂತ್ರದಿಂದ ಮುಂದಕ್ಕೆ ತತ್ತ್ವವನ್ನು ಹೇಳಲಿದ್ದಾರೆ. ಆದರೆ ಉಪದೇಶಿಸಲ್ಪಟ್ಟ ತತ್ತ್ವವು ಅಧಿಕಾರಿಯ ಹೃದಯದಲ್ಲಿಯೇ ಸ್ಥಿರವಾಗಿ ನೆಲೆಸುತ್ತದೆ. ಆದುದರಿಂದ ಈ ಉಪನಿಷತ್ತಿನಲ್ಲಿ ಅಧಿಕಾರಿಸಿದ್ಧಿಗೋಸ್ಕರವಾಗಿ ತೃಷ್ಣಾವಿಚ್ಛೇದ = ಅತಿಯಾಸೆಯ ತ್ಯಾಗ ಎಂಬುದನ್ನು ಮೊದಲು, ಮೊದಲನೆಯ ಮಂತ್ರ-ದಿಂದ ಯುಕ್ತಿಯುಕ್ತವಾಗಿ ವಿಧಾನ ಮಾಡುತ್ತಾರೆ.

**ಯತ್‌ಕಿಂಚ ಜಗದಿದಂ ತತ್ಸರ್ವಂ ಪ್ರವೃತ್ತ್ಯರ್ಥಂ ಆತ್ಮನಿ ಈಶಾವಾಸ್ಯಂ; ಆವಾಸಮರ್ಹತೀ-ತ್ಯಾವಾಸ್ಯಂ, ಈಶಸ್ಯಾವಾಸ್ಯಂ ಈಶಾವಾಸ್ಯಂ, ಈಶಾನುಪ್ರವಿಷ್ಟಮಿತ್ಯರ್ಥಃ । ತದೇವಾನುಪ್ರಾವಿಶತ್ ಇತ್ಯಾದೇಃ ।**

**ಅತೋಽಸ್ವತಂತ್ರಮಿತಿ ಭಾವಃ । ಕಿಂಚ ಜಗತ್ಯಾಂ ಪ್ರಕೃತಾವಿದಂ ಸರ್ವಮಾಶ್ರಿತಂ । ಸಾ ಚೇಶಾ-ಯತ್ತಾ । ಅತೋಽಪ್ಯಸ್ವತಂತ್ರಮ್ । ಈಶ ಏವ ಸ್ವತಂತ್ರಃ । ತೇನ ಕಾರಣೇನ ತೇನ ಈಶ್ವರೇಣ ತ್ಯಕ್ತೇನ ದತ್ತೇನ ವಿತ್ತೇನ, ಯದೃಚ್ಛಾಲಬ್ಧೇನೇತಿ ಯಾವತ್, ಭುಂಜೀಥಾಃ ಭೋಗಂ ಕುರ್ಯಾಃ ।**

**ಕಸ್ಯಸ್ವಿತ್ ಕಸ್ಯಾಪಿ ರಾಜಾದೇಃ ಸಕಾಶಾದ್ ಧನಂ ಮಾ ಗೃಧಃ ನಾಽಽಕಾಂಕ್ಷೇಥಾಃ ಈಶಾದನ್ಯ-ಸ್ಯಾಸ್ವಾತಂತ್ರ್ಯೇಣ ತಸ್ಯ ದಾನೇ ಸಾಮರ್ಥ್ಯಾಭಾವಾದೀಶದತ್ತೇನೈವ ವರ್ತೇತೇತಿ ಭಾವಃ ॥**

ಈ ಚರಾಚರಾತ್ಮಕವಾದ ಚೇತನಾಚೇತನಾತ್ಮಕವಾದ ಯಾವತ್ತೂ ಜಗತ್ತು ತನ್ನ ವ್ಯಾಪಾರಕ್ಕೋಸ್ಕರ ತನ್ನಲ್ಲಿಯೇ ಸನ್ನಿಹಿತನಾಗಿರುವ ಈಶ್ವರನ ಆವಾಸಕ್ಕೆ ಯೋಗ್ಯವಾಗಿದೆ. ಅಂದರೆ ಈ ಪ್ರಪಂಚದಲ್ಲಿ ಚರಾಚರ ಚೇತನಾ ಚೇತನಗಳಲ್ಲೂ ಯಾವ ಅತ್ಯಲ್ಪವಾದ ಚೇಷ್ಟೆಯಾಗಲಿ ಮಹತ್ತಾದ ಚೇಷ್ಟೆಯಾಗಲಿ ಆಗಬೇಕಾದರೆ ಅಲ್ಲಿ ಈಶ್ವರನ ಸನ್ನಿಧಾನವು ಇರಲೇ-ಬೇಕು. ಆವಾಸಂ ಅರ್ಹತೀತಿ ಆವಾಸ್ಯಂ = ತನ್ನಲ್ಲಿ ಆವಾಸವನ್ನು ಹೊಂದುವುದಕ್ಕೆ ಯೋಗ್ಯವಾಗಿ ಇರತಕ್ಕಂತಹದು. ಈಶಸ್ಯ ಆವಾಸ್ಯಂ, ಈಶನಿಗೆ ಆವಾಸ್ಯವಾದುದು, ಅಂದರೆ ಈಶಾನುಪ್ರವಿಷ್ಟಂ = ಈಶ್ವರನಿಂದ ಪ್ರವೇಶಿಸಲ್ಪಟ್ಟದ್ದು ಎಂದು ಅರ್ಥ. ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್ ಪರಬ್ರಹ್ಮವು ಜಗತ್ತನ್ನು ಸೃಷ್ಟಿಮಾಡಿ ತಾನೇ ಸ್ವತಃ ಆ ಸೃಷ್ಟಿಸಿದ ವಸ್ತುವನ್ನು ಪ್ರವೇಶಿಸಿತು ಎಂದು ಅರ್ಥ.

ಮತ್ತೊಂದು ವಿಷಯವಿದೆ, ಪ್ರಕೃತಿರೂಪಳಾದ ಲಕ್ಷ್ಮೀದೇವಿಯಲ್ಲಿ ಇದೆಲ್ಲವೂ ಕೂಡ ಆಶ್ರಯಿಸಿದೆ. ಅವಳಾದರೋ ಈಶ್ವರನಿಗೆ ಅಧೀನಳು. ಆದುದರಿಂದಲೂ ಕೂಡ ಜಗತ್ತು ಅಸ್ವತಂತ್ರವು, ಈಶನು ಮಾತ್ರವೇ ಸ್ವತಂತ್ರನು. ಈ ಕಾರಣದಿಂದ ಆ ಈಶ್ವರನು ಕೊಟ್ಟಿರುವ ಸಂಪತ್ತಿನಿಂದ ಜೀವಿಸು. ಯದೃಚ್ಛಾಲಾಭ ಸಂತುಷ್ಟನಾಗಿ, ಪರಮಾತ್ಮನು ಅನುಗ್ರಹಿಸಿ ಕೊಟ್ಟಿರುವ

Rarest Archiver

ಸಂಪತ್ತಿನಿಂದ ಒದಗುವ ಭೋಗವನ್ನು ಅನುಭವಿಸು. ಯಾವನಾದರೂ ಒಬ್ಬ ರಾಜ ಮುಂತಾದವರ ಬಳಿಗೆ ಹೋಗಿ ಹಣವನ್ನು ಬೇಡುವುದು ಬೇಡ. ಪರಮಾತ್ಮನ ಹೊರತು ಮತ್ತಾರೂ ಸ್ವತಂತ್ರರಿಲ್ಲ; ಕೊಡುವ ವಿಷಯದಲ್ಲಿ ಪರಮಾತ್ಮನ ಹೊರತು ಮತ್ತಾರಿಗೂ ಸಾಮರ್ಥ್ಯವಿಲ್ಲ, ಸ್ವಾತಂತ್ರವಿಲ್ಲ ಆದುದರಿಂದ ಈಶನು ಕೊಟ್ಟಿರುವುದರಿಂದಲೇ ಜೀವಿಸು, ಅತಿಯಾಸೆ ಬೇಡ ನಿರಾಸೆಯೂ ಬೇಡ.

**ತೃಷ್ಣಾವಿಚ್ಛೇದವತ್ ಸ್ವೋಚಿತಕರ್ಮಾನುಷ್ಠಾನಮಪಿ ಜ್ಞಾನಾರ್ಥಿನಾಮಾವಶ್ಯಕಮಿತ್ಯಾಹ ಕುರ್ವನ್ನೇವೇತಿ ।**

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತꣳ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥ 2 ॥**

**ಶತಂ ಸಮಾಃ ಶತಂ ವರ್ಷಾಣಿ । 'ಕಾಲಾಧ್ವನೋರತ್ಯಂತಸಂಯೋಗೇ' ಇತಿ ದ್ವಿತೀಯಾ । ಇಹ ಮಾನುಷಾದಿಜನ್ಮನಿ ಯಾವತ್ ಜಿಜೀವಿಷೇತ್ ಜೀವಿತುಂ ಇಚ್ಛೇತ್ ತಾವತ್ ಕರ್ಮಾಣಿ ಕುರ್ವನ್ನೇವ ಆಮರಣಂ ಭಗವತ್ಪೂಜಾತ್ಮಕಾನಿ ಅಸಂಕಲ್ಪಿತಫಲಾನಿ ಸ್ವೋಚಿತಾನಿ ಕರ್ಮಾಣಿ ಸರ್ವಥಾ ಕುರ್ಯಾದ್ ಇತಿ ಯಾವತ್ । ಕುತ ಏವಂ ಕರ್ಮಾಣಿ ಕುರ್ವತಿ ನರೇ ಮನುಷ್ಯಮಾತ್ರೇಽಪಿ ತ್ವಯಿ ಕರ್ಮ ಪಾಪಂ ನ ಲಿಪ್ಯತೇ । ಸ್ವೋಚಿತೇನ ಅಸಂಕಲ್ಪಿತಫಲೇನ ಕರ್ಮಣಾ ಭಗವತ್ಪೂಜಾಂ ಕುರ್ವಂತಮ್ ಅಲ್ಪಾಧಿಕಾರಿಣಮಪಿ ನ ಪ್ರಾಗುತ್ತರಾಣಿ ಪಾಪಾನಿ ಬಾಧಂತೇ । ತತಶ್ಚ ಜ್ಞಾನಾಧಿಕಾರೀ ಸ ಭವತಿ ಇತಿ ಯಾವತ್ । ಇತಃ ಕರ್ಮಕರಣಾತ್ ಅನ್ಯಥಾ ಅಕರಣೇ ಕರ್ಮ ಪಾಪಂ ನ ಲಿಪ್ಯತೇ ಇತಿ ನಾಸ್ತಿ । ಭಗವತ್ಪೂಜಾಂ ಅಕುರ್ವಂತಂ ಪಾಪಾನಿ ಬಾಧಂತೇ ಏವ । ತತಶ್ಚಾಸೌ ಜ್ಞಾನೇ ನಾಧಿಕ್ರಿಯತೇ, ಅತಶ್ಚ ಕರ್ಮಾಣಿ ಕುರ್ಯಾತ್ ಇತಿ । ಪುರಾಷಾರ್ಥನಯೇ 'ನಿಯಮಾಚ್ಚ' (ಬ್ರ. ಸೂ. 3-4-7) ಇತಿ ಬ್ರಹ್ಮಸೂತ್ರಭಾಷ್ಯಾದೌ ನರೇ ಜ್ಞಾನಿನ್ಯಪಿ ತ್ವಯಿ ಕರ್ಮ ನ ಲಿಪ್ಯತೇ ಇತಿ ನಾಸ್ತಿ ಅಪರೋಕ್ಷಜ್ಞಾನಿನೋಽಪಿ ಕರ್ಮಾಕರಣೇ ಮುಕ್ತೌ ಆನಂದಹ್ರಾಸರೂಪಪಾಪಕರ್ಮಲೇಪಃ ಅಸ್ತ್ಯೇವೇತಿ ಜ್ಞಾನಿಪರತಯಾ ಮಂತ್ರಃ ವ್ಯಾಖ್ಯಾತಃ ॥ 2 ॥**

ಅತಿಯಾಸೆಯನ್ನು ಬಿಟ್ಟುಬಿಡುವಂತೆ ತನಗೆ ಯೋಗ್ಯವಾದ ಕರ್ಮಾನುಷ್ಠಾನವು ಜ್ಞಾನಾಪೇಕ್ಷಿಯಾದವನಿಗೆ ಆವಶ್ಯಕವೆಂದು ಕುರ್ವನ್ನೇವ ಎಂಬ ಎರಡನೆಯ ಮಂತ್ರದಿಂದ ಹೇಳುತ್ತಾರೆ. ಮಾನವನು ಈ ಮನುಷ್ಯಾದಿಜನ್ಮಗಳಲ್ಲಿ ನೂರುವರ್ಷಪರ್ಯಂತವಾಗಿ ಬದುಕಿ ಬಾಳಲು ಇಚ್ಛಿಸುತ್ತಾನೆ. ಹಾಗೆ ನೂರುವರ್ಷದವರೆಗೆ ಆರೋಗ್ಯದೃಢ ಗಾತ್ರನಾಗಿ ಮನುಷ್ಯನು ಬಾಳಲು ಪ್ರಯತ್ನಿಸಬೇಕು. ಆದರೆ ಮರಣಪರ್ಯಂತವಾಗಿಯೂ ಪರಮಾತ್ಮನ ಪೂಜಾರೂಪವಾದ ಕರ್ಮಗಳನ್ನು ಮಾಡುತ್ತಾ ಫಲಾಭಿಲಾಷೆಯನ್ನು ಇಟ್ಟುಕೊಳ್ಳದೆ ತನ್ನ ವರ್ಣಾಶ್ರಮಕ್ಕೆ ಉಚಿತವಾದ ಕರ್ಮಗಳನ್ನು ಬಿಡದೆ ಎಲ್ಲಾ ರೀತಿಯಿಂದಲೂ ಮಾಡುತ್ತಿರಬೇಕು ಎಂದು ತಾತ್ಪರ್ಯ. ಏತಕ್ಕೆಂದರೆ ಈ ರೀತಿ ನಿಯತವಾದ ಕರ್ಮಗಳನ್ನು ಮಾಡುತ್ತಿರುವ ನೀನು ಸಾಧಾರಣ ಮಾನವನಾಗಿದ್ದರೂ ನಿನಗೆ ಪಾಪಕರ್ಮಲೇಪವು ಉಂಟಾಗುವುದಿಲ್ಲ. ಫಲಾಪೇಕ್ಷೆ ಇಲ್ಲದೆ ತನಗೆ ಯೋಗ್ಯವಾದ ಕರ್ಮವನ್ನು ಮಾಡುತ್ತಾ ಪರಮಾತ್ಮನ ಪೂಜೆಯನ್ನು ಮಾಡುತ್ತಿರುವವನು ಅಲ್ಪಾಧಿ

Rarest Archiver

ಕಾರಿಯಾದರೂ ಕೂಡ ಅವನನ್ನು ಹಿಂದಿನ ಸಂಚಿತ ಕರ್ಮಗಳು ಮತ್ತು ಮುಂದಿನ ಆಗಾಮಿ ಕರ್ಮಗಳು ಬಾಧಿಸುವುದಿಲ್ಲ. ಅನಂತರ ಅವನು ಜ್ಞಾನಾಧಿಕಾರಿಯಾಗುತ್ತಾನೆ. ಹೀಗೆ ಕರ್ಮವನ್ನು ಮಾಡದೆ ಇದ್ದರೆ ಅಂತಹವನಿಗೆ ಪಾಪಲೇಪವು ಉಂಟಾಗುವುದಿಲ್ಲವೆಂದಿಲ್ಲ. ಅಂದರೆ ಪರಮಾತ್ಮನ ಪೂಜೆಯೆಂಬ ಭಾವನೆಯಿಂದ ತನಗೆ ಯೋಗ್ಯವಾದ ಕರ್ಮಗಳನ್ನು ಮಾಡದಿರುವವನನ್ನು ಹಿಂದು ಮುಂದಿನ ಪಾಪಗಳು ಬಾಧಿಸಿಯೇ ತೀರುತ್ತವೆ. ಅಂತಹವನು ಜ್ಞಾನದಲ್ಲಿ ಅಧಿಕಾರಿಯಾಗುವುದಿಲ್ಲ, ಆದುದರಿಂದ ಕರ್ಮಗಳನ್ನು ಮಾಡಲೇಬೇಕು.

ಅಪರೋಕ್ಷಜ್ಞಾನಿಯೂ ಕೂಡ ವಿಹಿತವಾದ ಕರ್ಮವನ್ನು ಮಾಡಲೇಬೇಕು, ಹಾಗೆ ಮಾಡದಿದ್ದರೆ ಮಾನವನಾದ ನೀನು ಅಪರೋಕ್ಷಜ್ಞಾನಿಯಾಗಿದ್ದರೂ ನಿನಗೆ ಕರ್ಮಲೇಪವಿಲ್ಲವೆಂದಿಲ್ಲ. ಮುಕ್ತಿಯಲ್ಲಿ ಆನಂದಹ್ರಾಸರೂಪವಾದ ಕರ್ಮಲೇಪವು ಇದ್ದೇ ಇದೆ. ಹೀಗೆ ಅಪರೋಕ್ಷಜ್ಞಾನಿಯ ಪರವಾಗಿ ಈ ಮಂತ್ರವನ್ನು ಪುರುಷಾರ್ಥಾಧಿಕರಣವೆಂಬ ಬ್ರಹ್ಮಸೂತ್ರಭಾಷ್ಯತೃತೀಯಾಧ್ಯಾಯದ ನಾಲ್ಕನೇ ಪಾದದಲ್ಲಿ ನಿಯಮಾಚ್ಚ ಎಂಬ ಗುಣಸೂತ್ರದಲ್ಲಿ ವ್ಯಾಖ್ಯಾನಿಸಿದ್ದಾರೆ. ಹೀಗೆ ಅಪರೋಕ್ಷ ಜ್ಞಾನಿಯು ಕರ್ಮವನ್ನು ಮಾಡಲೇ ಬೇಕೆಂದಾದರೆ ಅಪರೋಕ್ಷಜ್ಞಾನವಿಲ್ಲದಿರುವ ಸಾಧಕನು ಸರ್ವದಾ ಕರ್ಮಾಚರಣೆಯನ್ನು ಮಾಡಲೇಬೇಕು ಎಂಬ ವಿಷಯವು ಕೈಮುತ್ಯದಿಂದ ಸಿದ್ಧವಾಯಿತು ಎಂದು ಪರಮತಾತ್ಪರ್ಯ.

***ವಿಶೇಷಾಂಶ :-*** ಶತಂ ಸಮಾಃ ಜಿಜೀವಿಷೇತ್ ಎಂಬಲ್ಲಿ ನೂರು ಸಂವತ್ಸರಗಳನ್ನು (ನೂರು ವರ್ಷಪರ್ಯಂತವಾಗಿ) ಎಂದು ದ್ವಿತೀಯಾವಿಭಕ್ತಿಯು ಉಪನಿಷತ್ತಿನಲ್ಲಿ ಬಂದಿದೆ. ಇಲ್ಲಿ ಕಾಲಾಧ್ವನೋಃ ಅತ್ಯಂತಸಂಯೋಗೇ (ಪಾ. ಸೂ. 2-3-5) ಕಾಲ ಮತ್ತು ಅಧ್ವ (ಮಾರ್ಗ) ಇವುಗಳಿಗೆ ಕ್ರಿಯೆಯ ಅತ್ಯಂತ ಸಂಯೋಗವಿದ್ದಾಗ ಕಾಲವಾಚಕವಾದ ಮತ್ತು ಮಾರ್ಗವಾಚಕವಾದ ಶಬ್ದಕ್ಕೆ ದ್ವಿತೀಯಾವಿಭಕ್ತಿಯು ಬರುತ್ತದೆ. ಮಾಸಂ ಅಧೀತೇ ಒಂದು ತಿಂಗಳು ಪೂರ್ತಿಯಾಗಿ ಅಧ್ಯಯನ ಮಾಡುತ್ತಾನೆ ಎಂದು ಉದಾಹರಣೆ. ಅದರಂತೆಯೇ ಇಲ್ಲಿಯೂ ಶತಂ ಸಮಾಃ ಜಿಜೀವಿಷೇತ್ ಎಂದು ದ್ವಿತೀಯಾವಿಭಕ್ತಿಯ ಬಂದಿದೆ.

**ಏವಂ ಪ್ರಾಪ್ತಾಧಿಕಾರಂ ಪ್ರತಿ ಪರಮಾತ್ಮತತ್ತ್ವಬುಭುತ್ಸಾಜನನಾಯ ವಿಪರೀತಜ್ಞಾನಿನೋ ನಿಂದಾ-ಮಾಹ - ಅಸುರ್ಯಾ ಇತಿ ।**

**ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾಽಽವೃತಾಃ ।**
**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾಽತ್ಮಹನೋ ಜನಾಃ ॥ 3 ॥**

**ಸುಷ್ಠು ರಮಣಂ ಸುರ್ಯಮ್ । ಸುಪೂರ್ವಸ್ಯ ರಮತೇಃ ಡ್ಯಪ್ರತ್ಯಯಃ । ತದ್ವಿರುದ್ಧಮಸುರ್ಯಂ ಮಹಾದುಃಖಮ್, ಅಸುರ್ಯಮೇಷ್ವಸ್ತೀತ್ಯಸುರ್ಯಾಃ । ಅರ್ಶಆದ್ಯಚ್ಪ್ರತ್ಯಯಾಂತೋಽಯಮ್ । ಮಹಾದುಃಖವತ್ತ್ವಾದಸುರ್ಯಾಃ । ಅಸುರಪ್ರಾಪ್ಯತ್ವಾದ್ವಾ ಅಸುರ್ಯಾಃ, ಅಂಧೇನ ತಮಸಾ ಅಂಧ-ಯತೀತಿ ವ್ಯುತ್ಪತ್ತ್ಯಾ ನಿಬಿಡಾಂಧಕಾರೇಣೇತ್ಯರ್ಥಃ । ಆವೃತಾಸ್ತೇ ಪ್ರಸಿದ್ಧಾಃ ಯ ಇತಿ ಶೇಷಃ । ಲೋಕಾ-ಸ್ತಾನ್ ಪ್ರೇತ್ಯ ಮೃತ್ವಾಽಭಿಗಚ್ಛಂತಿ । ತೇ ಕೇ ಇತ್ಯತ ಉಕ್ತಂ ಯ ಇತಿ ॥ ಆತ್ಮಹನಃ ಯಥಾವದಾತ್ಮಾನ-ಮಜ್ಞಾತ್ವಾ ವೈಪರೀತ್ಯೇನ ಜಾನಂತೋ ಯೇ ಕೇಚನ ವರ್ತಂತೇ ತೇ ಸರ್ವೇಽಪಿ ಅಭಿಗಚ್ಛಂತೀತಿ ನಾಮ ನಿಶ್ಚಿತಮೇತದಿತ್ಯರ್ಥಃ ॥ 3 ॥**

Rarest Archiver

ಹೀಗೆ ಸಾತ್ವಿಕ ಪ್ರಕೃತಿಯ ಯೋಗ್ಯಚೇತನನಿಗೆ ತತ್ವಜ್ಞಾನದ ಅಧಿಕಾರವು ಹೇಗಿರಬೇಕು ಎಂಬುದನ್ನು ಹೇಳಿ-ದ್ದಾಯಿತು. ಅನಂತರ ಪರಮಾತ್ಮನ ತತ್ವಜ್ಞಾನದ ಪ್ರಾಪ್ತಿಯ ಇಚ್ಛೆಯನ್ನು ಉಂಟು ಮಾಡುವುದಕ್ಕಾಗಿ ಹಿಂದೆ ಹೇಳಿದ ತತ್ವಜ್ಞಾನಾಧಿಕಾರಕ್ಕೆ ವಿಪರೀತವಾದ ಮಿಥ್ಯಾಜ್ಞಾನವುಳ್ಳವನನ್ನು ಮುಂದಿನ ಮಂತ್ರದಲ್ಲಿ ನಿಂದಿಸಿರುತ್ತಾರೆ. ಸಮೀಚೀನವಾದ ರಮಣ ಎಂದರೆ ಸುಖಾನುಭವನೇ ಸುರ್ಯ ಎನ್ನಿಸಿಕೊಳ್ಳುತ್ತದೆ. ಸು ಉಪಸರ್ಗಪೂರ್ವಕವಾದ ರಮಧಾತುವಿಗೆ ಡ್ಯ ಪ್ರತ್ಯಯ ಬಂದು ಸುರ್ಯ ಎಂದು ರೂಪವಾಗಿದೆ. ಅದಕ್ಕೆ ವಿರುದ್ಧವಾದುದು ಅಸುರ್ಯವು. ಅಂದರೆ ಮಹಾದುಃಖವು ಅಸುರ್ಯವು, ಇದು ಯಾವ ಲೋಕಗಳಲ್ಲಿ ಇದೆಯೋ ಆ ಲೋಕಗಳನ್ನೇ ಅಸುರ್ಯ ಎಂದು ಹೇಳುತ್ತಾರೆ. ಅಸುರ್ಯಂ ಏಷು ಅಸ್ತಿ ಮಹಾದುಃಖ ಇಲ್ಲಿ ಇದೆ ಎಂಬ ಅರ್ಥದಲ್ಲಿ ಅರ್ಶ ಆದಿಭ್ಯೋ ಅಚ್ ಎಂಬ ಸೂತ್ರದಿಂದ ಅಚ್ ಪ್ರತ್ಯಯವು ಬಂದಿದೆ. ಹೀಗೆ ಮಹಾದುಃಖವುಳ್ಳ ಲೋಕಗಳನ್ನೇ ಅಸುರ್ಯ ಎಂದು ಹೇಳುತ್ತಾರೆ. ಅಥವಾ ಅಸುರರಿಂದ ಹೊಂದಲು ಯೋಗ್ಯವಾದುದರಿಂದ ಅಸುರ್ಯ ಎಂಬ ಹೆಸರಿನ ಲೋಕಗಳಿವೆ. ಅವುಗಳು ಕಣ್ಣನ್ನು ಕುರುಡಾಗಿಸುವುದರಿಂದ ಕಾಣದಂತೆ ಮಾಡುವುದರಿಂದ ಅಂಧ ಎನ್ನಿಸಿಕೊಳ್ಳುವ ನಿಬಿಡಾಂಧಕಾರದಿಂದ ಆವರಿಸಲ್ಪಟ್ಟಿವೆ. ಹಾಗೆ ಪ್ರಸಿದ್ಧವಾದ ಯಾವ ಲೋಕಗಳಿವೆಯೋ ಆ ಲೋಕಗಳನ್ನು ಕುರಿತು ಸತ್ತ ಮೇಲೆ ಕೆಲವು ಚೇತನರು ಹೋಗಿ ಸೇರುತ್ತಾರೆ. ಅವರು ಯಾರು ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. ಆತ್ಮಹನರು=ಯಥಾವತ್ತಾಗಿ ಆತ್ಮನನ್ನು ತಿಳಿಯದೇ ವಿಪರೀತವಾಗಿ ಆತ್ಮನನ್ನು ತಿಳಿಯುವ ಯಾವ ಜನರಿದ್ದಾರೋ ಆತ್ಮಘಾತಿಗಳು ಅಂತಹವರು ಎಲ್ಲರೂ ಅಂಧತಮಸವೆಂಬ ಲೋಕಗಳಿಗೆ ಹೋಗುತ್ತಾರೆ ಎಂಬುದು ಶ್ರುತಿಪುರಾಣ ಸ್ಮೃತಿಗಳಿಂದ ನಿಶ್ಚಿತವಾದ ವಿಚಾರವು.

**ಇದಾನೀಂ ಪರಮಾತ್ಮತತ್ತ್ವಮುಪದಿಶತಿ ಅನೇಜದಿತ್ಯಾದಿ ಮಂತ್ರದ್ವಯೇನ ।**

**ಅನೇಜದೇಕಂ ಮನಸೋ ಜವೀಯೋ**
**ನೈನದ್ ದೇವಾ ಆಪ್ನುವನ್ ಪೂರ್ವಮರ್ಷತ್ ।**
**ತದ್ಧಾವತೋಽನ್ಯಾನತ್ಯೇತಿ ತಿಷ್ಠತ್**
**ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥ 4 ॥**

**ತತ್ ಪರಮಾತ್ಮಸ್ವರೂಪಮ್ । ಅನೇಜತ್ । ಏಜೃ ಕಂಪನೇ । ಅಕಂಪಮಾನಂ ನಿರ್ಭಯತ್ವಾದಿತಿ ಭಾವಃ । ಏಕಂ ಪ್ರಧಾನಮ್ । ಮನಸೋಽಪಿ ಜವೀಯಃ ವೇಗವತ್ತರಮ್ । ಏತತ್ ಪರಬ್ರಹ್ಮಸ್ವರೂಪಂ ದೇವಾ ನಾಪ್ನುವನ್ ಸಾಕಲ್ಯೇನ ನ ವ್ಯಜಾನನ್ । ಬ್ರಹ್ಮ ತು ಪೂರ್ವಂ ಅನಾದಿಕಾಲಂ, ಸ್ವಭಾವತಃ ಇತಿ ಯಾವತ್ । ಅರ್ಷತ್, ಋಷ ಜ್ಞಾನೇ, ಸರ್ವಂ ವ್ಯಜಾನಾತ್ । ಆಡಾಗಮಾಭಾವಶ್ಛಾಂಧಸಃ । ತದ್ ಬ್ರಹ್ಮ ತಿಷ್ಠತ್ ವಿದ್ಯಮಾನಮೇವ ಸತ್ ಧಾವತೋ ವೇಗೇನ ಗಚ್ಛತೋಽನ್ಯಾನ್ ಜನಾನತ್ಯೇತಿ ಅತಿಕ್ರಮ್ಯ ವರ್ತತೇ । ಅಚಿಂತ್ಯಶಕ್ತಿತ್ವಾತ್ ಸರ್ವಗತತ್ವಾಚ್ಚೇತಿ ಭಾವಃ । ತಸ್ಮಿನ್ ಹರೌ ಮಾತರಿಶ್ವಾ ಮುಖ್ಯವಾಯುಃ ಆ ಸಮಂತಾತ್ಪಾಲಯಂತೀತಿ ವ್ಯುತ್ಪತ್ತ್ಯಾ ಅಪಃ ಕರ್ಮಾಣಿ, ಸ್ವಪ್ರೇರಣಯಾ ಪ್ರಾಣಿಭಿಃ, ಕ್ರಿಯಮಾಣಾನಿ, ಪುಣ್ಯಕರ್ಮಾಣಿ ದಧಾತಿ ಸಮರ್ಪಯತೀತಿ ॥ 4 ॥**

Rarest Archiver

ಇನ್ನು ಮುಂದೆ ಅನೇಜದೇಕಂ, ತದೇಜತಿ ತನ್ನೇಜತಿ ಎಂಬ ಎರಡು ಮಂತ್ರಗಳಿಂದ ಪರಮಾತ್ಮನ ತತ್ವವನ್ನು ಉಪದೇಶಿಸುತ್ತಾರೆ. ಆ ಪರಮಾತ್ಮ ಸ್ವರೂಪವು ಅನೇಜತ್ ಯಾವಾಗಲೂ ನಿರ್ಭಯವಾದುದರಿಂದ ನಡುಗುವಂತಹದು ಅಲ್ಲ. ಅದು ಏಕ ಅಂದರೆ ಪ್ರಧಾನವಾದುದು ಮನಸ್ಸಿಗಿಂತಲೂ ಕೂಡ ಹೆಚ್ಚು ವೇಗವುಳ್ಳದ್ದು. ಈ ಪರಬ್ರಹ್ಮ ಸ್ವರೂಪವನ್ನು ದೇವತೆಗಳೂ ಸಂಪೂರ್ಣವಾಗಿ ತಿಳಿದಿಲ್ಲ. ಪರಬ್ರಹ್ಮ ಸ್ವರೂಪಿಯಾದ ನಾರಾಯಣನಾದರೋ ಅನಾದಿಕಾಲದಿಂದ ಸ್ವಭಾವದಿಂದಲೇ ಎಲ್ಲವನ್ನು ತಿಳಿದಿದ್ದಾನೆ. ಈಗಲೂ ತಿಳಿಯುತ್ತಾನೆ, ಮುಂದೆಯೂ ಅವನ ತಿಳುವಳಿಕೆಯು ಲೋಪ ಹೊಂದುವುದಿಲ್ಲ.

ಆ ಪರಬ್ರಹ್ಮಸ್ವರೂಪಿಯಾದ ಶ್ರೀಮನ್ನಾರಾಯಣನು ಒಂದೇ ಕಡೆಗೆ ಇದ್ದುಕೊಂಡು ವೇಗದಿಂದ ಹೋಗುತ್ತಿರುವ (ಓಡುತ್ತಿರುವ) ಇತರ ಎಲ್ಲಾ ಜೀವರನ್ನೂ ಮೀರಿ ಹೋಗುತ್ತಿದ್ದಾನೆ. ತಾನು ಇದ್ದಲ್ಲೇ ಇದ್ದುಕೊಂಡು ಇತರರು ಹೋಗುವ ಜಾಗದಲ್ಲಿ ಅವರಿಗಿಂತ ಮೊದಲೇ ಇರುವುದು ಹೇಗೆ? ಪರಮಾತ್ಮನಲ್ಲಿ ಅಚಿಂತ್ಯ ಶಕ್ತಿ ಎಂಬ ಒಂದು ಧರ್ಮ ಗುಣವಿದೆ, ಅದರಿಂದಲೂ ಅವನು ಸರ್ವಗತ ಅಂದರೆ ಸರ್ವತ್ರ ವ್ಯಾಪ್ತನಾಗಿರುವುದರಿಂದಲೂ ಎಲ್ಲಾ ಜೀವರನ್ನೂ ಮೀರಿಸುವ ಈ ಸಾಮರ್ಥ್ಯವು ಅವನಲ್ಲಿದೆ. ಅಂತಹ ಶ್ರೀಹರಿಯಲ್ಲಿ ಮುಖ್ಯಪ್ರಾಣನು ಎಲ್ಲಾ ಜೀವಾತ್ಮರೂ ಮಾಡುವ ಪುಣ್ಯ-ಕರ್ಮಗಳನ್ನು ಸಮರ್ಪಿಸುತ್ತಾನೆ.

**ತದೇಜತಿ ತನ್ನೇಜತಿ ತದ್ ದೂರೇ ತದ್ವಂತಿಕೇ ।**
**ತದಂತರಸ್ಯ ಸರ್ವಸ್ಯ ತದು ಸರ್ವಸ್ಯ ಬಾಹ್ಯತಃ ॥ 5 ॥**

**ತದಿತಿ ಪಂಚಮ್ಯರ್ಥೇಽವ್ಯಯಮ್ । ಜಗದಿತಿ ಶೇಷಃ । ತತ್ ತಸ್ಮಾತ್ತತ್ಕೃತ್ಯಾದ್ಧರೇಃ ಜಗದೇಜತಿ ಬಿಭೇತಿ । ತದ್ ಬ್ರಹ್ಮ ನೇಜತಿ ನ ಬಿಭೇತಿ । ಸ್ವತಂತ್ರತ್ವಾದಿತಿ ಭಾವಃ । ತದು ತದೇವ ಬ್ರಹ್ಮ ದೂರೇ । ತದು ತದೇವಾಂತಿಕೇ ಸಮೀಪೇ ಚ, ಸರ್ವಗತತ್ವಾದಿತಿ ಭಾವಃ । ತದ್ ಬ್ರಹ್ಮ ಅಸ್ಯ ಪ್ರಮಿತಸ್ಯ ಸರ್ವಸ್ಯಾಂತಃ । ತದು ತದೇವ ಸರ್ವಸ್ಯ ಬಾಹ್ಯತಃ ಬಹಿರಪಿ । ಸರ್ವವ್ಯಾಪಿತ್ವಾದಿತಿ ಭಾವಃ ।**

ಆ ಪರಮಾತ್ಮನ ದೆಸೆಯಿಂದ ಸಮಸ್ತ ಚೇತನ ಪ್ರಪಂಚವೂ ಹೆದರುತ್ತದೆ. ಆ ಪರಬ್ರಹ್ಮನಾದರೋ ಸ್ವತಂತ್ರ-ನಾದುದರಿಂದ ಯಾರಿಂದಲೂ ಹೆದರುವುದಿಲ್ಲ. ಆ ಪರಬ್ರಹ್ಮರೂಪನಾದ ನಾರಾಯಣನು ದೂರದಲ್ಲಿಯೂ ಇರುತ್ತಾನೆ. ಸರ್ವತ್ರವ್ಯಾಪ್ತನಾದುದರಿಂದ ಅವನೇ ಹತ್ತಿರದಲ್ಲಿಯೂ ಇರುತ್ತಾನೆ. ನಮಗೆ ಪ್ರಮಾಣಗಳಿಂದ ತಿಳಿದು ಬರುವ ಸರ್ವ-ಪ್ರಪಂಚದ ಒಳಗೂ ಅವನು ನಿಯಾಮಕನಾಗಿ ಇರುತ್ತಾನೆ. ಅವನೇ ಸರ್ವಪ್ರಪಂಚದ ಹೊರಗೂ ಸರ್ವವ್ಯಾಪಿ-ಯಾದುದರಿಂದ ನಿಯಾಮಕನಾಗಿ ಇರುತ್ತಾನೆ.

**ತದ್ ದೂರೇ ಇತ್ಯಾದೌ ಹರೇಃ ಸರ್ವಭೂತಾಶ್ರಯತಯಾ ಸರ್ವಭೂತಗತತ್ವಮುಕ್ತಮ್ । ತಜ್ಜ್ಞಾನಸ್ಯ ಫಲಮಾಹ ಯಸ್ತ್ವಿತಿ.**

**ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥ 6 ॥**

**ಸರ್ವಾಣಿ ಭೂತಾನಿ ಚಿದಚಿದಾತ್ಮಕಂ ಸರ್ವಂ ಜಗತ್ । ಆತ್ಮನ್ಯೇವ ಪರಮಾತ್ಮಾಶ್ರಯತ್ವೇನೈವಾ-ಸ್ತೀತಿ ಯಸ್ತ್ವನು ನಿಃಸಂದೇಹಂ ಪಶ್ಯತಿ ಜಾನಾತಿ । ಯದ್ವಾ ಆಶ್ರಿತತತ್ಕ್ರಮಾನುರೋಧೇನೇತ್ಯನು-**

Rarest Archiver

**ಶಬ್ದಾರ್ಥಃ । ಸರ್ವಭೂತೇಷು ಚಾಽತ್ಮಾನಂ ಸರ್ವಭೂತೇಷು ನಿಯಂತೃತಯಾ ಸ್ಥಿತಂ ಹರಿಂ ಯೋಽನು-ಪಶ್ಯತೀತ್ಯನ್ವಯಃ । ತತಃ ಪರಮಾತ್ಮಸ್ವರೂಪಜ್ಞಾನಿತ್ವಾದ್ಧೇತೋರ್ನ ವಿಜುಗುಪ್ಸತೇ । ಸ್ವಾತ್ಮಾನಂ ಗೋಪ್ತುಂ ನೇಚ್ಛತಿ । ಭಯಾಭಾವಾದಿತಿ ಭಾವಃ ॥ 6 ॥**

ತದ್ ದೂರೇ ಆ ಬ್ರಹ್ಮವೆ ದೂರದಲ್ಲಿಯೂ ಇದೆ, ಹತ್ತಿರದಲ್ಲಿಯೂ ಇದೆ ಇತ್ಯಾದಿ ಐದನೇ ಮಂತ್ರದಲ್ಲಿ ಸಮಸ್ತ ಭೂತಗಳಿಗೂ ಆಶ್ರಯನಾದುದರಿಂದ ಶ್ರೀಹರಿಯು ಸರ್ವಭೂತಗಳಲ್ಲಿಯೂ ವ್ಯಾಪ್ತನಾಗಿದ್ದಾನೆ ಎಂದು ಹೇಳಿದ್ದಾನೆ. ಇಂತಹ ಜ್ಞಾನಕ್ಕೆ ಫಲವನ್ನು ಯಸ್ತು ಸರ್ವಾಣಿ ಭೂತಾನಿ ಎಂಬ ಮಂತ್ರದಲ್ಲಿ ಹೇಳುತ್ತಾರೆ.

ಸರ್ವಭೂತಗಳು ಎಂದರೆ ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತೂ ಪರಮಾತ್ಮನಲ್ಲಿಯೇ ಇದೆ. ಅಂದರೆ ಪರಮಾತ್ಮನನ್ನೇ ಆಶ್ರಯಿಸಿಕೊಂಡಿದೆ ಎಂದು ಯಾವ ಉಪಾಸಕನು ಭಕ್ತಿಯಿಂದ ನಿಸ್ಸಂದೇಹವಾಗಿ ತಿಳಿಯುತ್ತಾನೋ ಅವನೇ ಸರಿಯಾದ ಬ್ರಹ್ಮಜ್ಞಾನಿಯು. ಅಥವಾ ಸಮಸ್ತಚೇತನಾಚೇತನಾತ್ಮಕವಾದ ಜಗತ್ತು ಪರಮಾತ್ಮನನ್ನು ಯಾವ ಕ್ರಮದಿಂದ ಯಾವುದು ಮೊದಲು ಆಶ್ರಯಿಕೊಂಡಿದೆಯೋ ಆ ತಾರತಮ್ಯಕ್ರಮದಿಂದ ಅದೆಲ್ಲವೂ ಪರಮಾತ್ಮನಲ್ಲಿಯೇ ಇದೆಯೆಂದು ಉಪಾಸಕನು ತಿಳಿಯಬೇಕು. ಮತ್ತು ಈ ಚೇತನಾತ್ಮಕವಾದ ಮತ್ತು ಅಚೇತನಾತ್ಮಕವಾದ ಪ್ರಪಂಚದಲ್ಲಿಯೂ ನಿಯಾಮಕನಾಗಿ ಪರಮಾತ್ಮನು ಇದ್ದಾನೆ ಎಂಬ ವಿಷಯವನ್ನು ಯಾವನು ತಾರತಮ್ಯ ಕ್ರಮದಿಂದ ತಿಳಿಯುತ್ತಾನೋ ಅವನೇ ಶ್ರೀಹರಿಯ ಸರಿಯಾದ ಉಪಾಸಕನು ಮತ್ತು ಭಕ್ತನು. ಹೀಗೆ ಪರಮಾತ್ಮನ ಸ್ವರೂಪವನ್ನು ಸರಿಯಾಗಿ ತಿಳಿದಿರುವುದರಿಂದ ಅವನು ತನ್ನನ್ನು ರಕ್ಷಿಸಿಕೊಳ್ಳಲು ಇಚ್ಛಿಸುವುದಿಲ್ಲ. ಎಲ್ಲೆಡೆಯಲ್ಲಿಯೂ ಇರುವ ಪರಮಾತ್ಮನು ತನ್ನನ್ನು ರಕ್ಷಿಸುತ್ತಾನೆ ಎಂಬ ಜ್ಞಾನವು ನಿರಂತರವಾಗಿ ಅವನಿಗಿರುವುದರಿಂದ ಅವನಿಗೆ ಬೇರೆ ಯಾರಿಂದಲೂ ಭಯವಿರುವುದಿಲ್ಲ. ಈ ಕಾರಣದಿಂದಲೇ ಅವನು ತನ್ನನ್ನು ತಾನು ರಕ್ಷಿಸಿಕೊಳ್ಳಲು ಬಯಸುವುದಿಲ್ಲ.

**ಏತಮೇವಾರ್ಥಂ ವಿವೃಣೋತಿ ಯಸ್ಮಿನ್ನಿತಿ ।**

**ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾಭೂದ್ ವಿಜಾನತಃ ।**
**ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ ॥ 7 ॥**

**ಯಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ, ತಿಷ್ಠಂತೀತಿ ಶೇಷಃ, ಸಃ ಆತ್ಮೈವ ತತ್ರ ಸರ್ವಭೂತೇಷ್ವಭೂದ್ ಅನಾದಿತೋ ವರ್ತತ ಇತ್ಯರ್ಥಃ । ಏವಮಿತಿ ಶೇಷಃ, ಏವಂ ವಿಜಾನತಃ ಸರ್ವಾಧಾರತಯಾ ಸರ್ವೇಷು ಭೂತೇಷು ಆತ್ಮಾನಂ ವಿಶೇಷೇಣ ಜಾನತಃ, ಸರ್ವತ್ರ ಸ್ಥಿತಸ್ಯ ಹರೇರೇಕತ್ವಂ ಚಾನುಪಶ್ಯತಃ ಜಾನತಃ, ಕೋ ಮೋಹಃ, ಕಃ ಶೋಕಃ, ನ ಕೋಽಪೀತ್ಯರ್ಥಃ ॥ 7 ॥**

ಯಸ್ತು ಸರ್ವಾಣಿ ಭೂತಾನಿ ಎಂಬ ಮಂತ್ರದಲ್ಲಿ ಹೇಳಿರುವ ವಿಷಯವನ್ನೇ ಈ ಮಂತ್ರದಿಂದ ವಿವರಿಸುತ್ತಾರೆ. ಯಾವ ಪರಮಾತ್ಮನಲ್ಲಿ ಸಮಸ್ತಭೂತಗಳೂ ಇರುತ್ತವೆಯೊ ಅಂತಹ ಪರಮಾತ್ಮನೇ ಆ ಸಮಸ್ತ ಭೂತಗಳಲ್ಲಿಯೂ ಅನಾದಿಕಾಲ-ದಿಂದ ಇರುತ್ತಾನೆ. ಹೀಗೆ ಪರಮಾತ್ಮನು ಸಮಸ್ತಚೇತನಾಚೇತನಪ್ರಪಂಚಕ್ಕೂ ಆಧಾರನಾಗಿ ಆ ಸಮಸ್ತ ಭೂತಗಳಲ್ಲಿಯೂ ನಿಯಾಮಕನಾಗಿ ಇದ್ದಾನೆಂದು ವಿಶೇಷರೀತಿಯಿಂದ ಪರಮಾತ್ಮನನ್ನು ತಿಳಿಯಬೇಕು. ನಿಯಾಮಕನಾಗಿ ಇರುವ ಪರ-ಮಾತ್ಮನು ಅದೇ ರೂಪದಿಂದ ಆಧಾರನಾಗಿಯೂ ಅಧೇಯನಾಗಿಯೂ ಎಲ್ಲಾ ವಸ್ತುಗಳಲ್ಲಿಯೂ ಇರುತ್ತಾನೆ ಎಂಬ

Rarest Archiver

ತಿಳುವಳಿಕೆಯು ಬಹಳ ದುರ್ಲಭವು. ಅನಂತಚೇತನಾಚೇತನಾತ್ಮಕ ಪ್ರಪಂಚದಲ್ಲಿ ಇರುವ ಅನಂತರೂಪಗಳುಳ್ಳ ಪರಮಾತ್ಮನ ಆಧಾರವಾದ ರೂಪಗಳು ಆಧೇಯವಾದ ರೂಪಗಳೂ ಒಂದೇ ಆಗಿವೆ. ಅವುಗಳಲ್ಲಿ ಭೇದವಿಲ್ಲ ಎಂದು ಏಕತ್ವವನ್ನು ಪರಮಾತ್ಮನಲ್ಲಿ ಯಾವನು ತಿಳಿಯುತ್ತಾನೋ ಅವನಿಗೆ ಮೋಹವು ಅಂದರೆ ಅನ್ಯಥಾ ಜ್ಞಾನವು ಮತ್ತು ಶೋಕವು ಹೇಗೆ ಇರಲು ಸಾಧ್ಯ. ನನ್ನನ್ನು ಸರ್ವಪ್ರದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಪರಮಾತ್ಮನು ಕಾಪಾಡುತ್ತಾನೆಂದು ತಿಳುವಳಿಕೆಯುಳ್ಳ ಜ್ಞಾನಿಯು ಸರ್ವದಾ ದೇವರು ನನ್ನನ್ನು ಕಾಪಾಡುತ್ತಾನೆ ಎಂಬ ಧೃಡವಿಶ್ವಾಸದಿಂದ ಇರುವುದರಿಂದ ಅವನಿಗೆ ಮತ್ತೊಬ್ಬರಿಂದ ಆಪತ್ತು ಬಂದೀತು ಎಂಬ ಮೋಹವು ನನ್ನನ್ನು ಕಾಪಾಡುವವರು ಬೇರೊಬ್ಬರಿಲ್ಲ ಎಂಬ ಶೋಕವು ಉಂಟಾಗಲಾರದು ಎಂದು ಅಭಿಪ್ರಾಯ.

**ಭಗವಜ್‌ಜ್ಞಾನಮಾತ್ರೇಣ ಕುತೋ ಮೋಹಾದ್ಯಭಾವ ಇತ್ಯತ ಆಹ ಸ ಇತಿ ।**

**ಸ ಪರ್ಯಗಾಚ್ಛುಕ್ರಮಕಾಯಮವ್ರಣ-**
**ಮಸ್ನಾವಿರꣳ ಶುದ್ಧಮಪಾಪವಿದ್ಧಮ್ ।**
**ಕವಿರ್ಮನೀಷೀ ಪರಿಭೂಃ ಸ್ವಯಂಭೂ-**
**ರ್ಯಾಥಾತಥ್ಯತೋಽರ್ಥಾನ್ ವ್ಯದಧಾ-**
**ಚ್ಛಾಶ್ವತೀಭ್ಯಃ ಸಮಾಭ್ಯಃ ॥ 8 ॥**

ಸ ಜ್ಞಾನೀ ಪರ್ಯಗಾತ್ ಪ್ರಾಪ್ತೋಽಭೂತ್, ಬ್ರಹ್ಮೇತಿ ಶೇಷಃ । ತಾವತಾ ಕಥಂ ಶೋಕಾದ್ಯಭಾವ ಇತ್ಯತಸ್ತದ್ವಿಶಿನಷ್ಟಿ ಶುಕ್ರಮಿತ್ಯಾದಿನಾ । ಶುಚಂ ಶೋಕಂ ರಹತಿ ತ್ಯಜತೀತಿ ಶುಕ್ರಂ ಶೋಕರಹಿತಮ್ । ಅಕಾಯಂ ಲಿಂಗದೇಹರಹಿತಮ್ । ಅವ್ರಣಮ್ ವ್ರಣ ಸಂಚೂರ್ಣನ ಇತ್ಯತಃ ಸ್ತೋಕೋ ವ್ರಣಃ ಕಾಲೇನಾಸ್ತೋಕತ್ವಾದವ್ರಣಂ ನಿತ್ಯಮ್, ಗುಣೈರಸ್ತೋಕತ್ವಾದವ್ರಣಂ ಪೂರ್ಣಮಿತ್ಯರ್ಥಃ । ಅಸ್ನಾವಿರಂ ಸ್ನಾವೋಪಲಕ್ಷಿತಸಪ್ತಧಾತುಮಯಸ್ಥೂಲದೇಹರಹಿತಮ್ । ಶುದ್ಧಂ ಪಾವಿತ್ರ್ಯಹೇತುಮ್ । ಶುದ್ಧತ್ವಾದೇವಾಪಾಪವಿದ್ಧಮ್ । ತತ ಏವ ಹೇತೋಃ ಪಾಪಮೂಲಸ್ಥೂಲಸೂಕ್ಷ್ಮಶರೀರಹೀನಮ್ । ತತ ಏವ ದೇಹನಿಮಿತ್ತ ಶೋಕಾದಿಶೂನ್ಯಮಿತಿ ಶುಕ್ರಮಿತ್ಯುಚ್ಯತೇ । ಏವಂಭೂತಂ ಹರಿಂ ಪರ್ಯಗಾದ್ಯತೋಽತಃ ಕಾರಣಾಚ್ಛೋಕಾದ್ಯಭಾವಃ । ಏವಂಭೂತಹರಿಸಾರೂಪ್ಯಲಕ್ಷಣಾಂ ತದ್ಗತಿಂ ಗತಸ್ಯ ಶೋಕಾದ್ಯಭಾವೋ ಯುಕ್ತ ಇತಿ ಭಾವಃ । ನನ್ವೇವಮಶರೀರಶ್ಚೇಜ್ಜಗತ್ ಸ್ರಷ್ಟಾ ನೇತಿ ಪ್ರಾಪ್ತಮ್ । ಲೋಕೇ ಸದೇಹಸ್ಯೈವ ಸ್ರಷ್ಟೃತಾದರ್ಶನಾದಿತ್ಯಾಶಂಕಾಂ ನಿರಾಹ ಕವಿರಿತಿ । ಕವಿಃ ಸರ್ವಜ್ಞಃ । ಮನೀಷೀ ಪ್ರಕೃತ್ಯಾದಿಸರ್ವಮನಸಾಮೀಶಿತೃತ್ವಾನ್ಮನೀಷೀ । ಏತೇನ ಜ್ಞಾನಾವಿನಾಭೂತದೇಹವಾನಿತಿ ಲಭ್ಯತೇ । ಸ ಚಾಪ್ರಾಕೃತ ಏವೇತಿ ಪ್ರಾಗುಕ್ತಃ । ತನ್ನಿಮಿತ್ತಶೋಕಾದ್ಯಭಾವೋ ಯುಕ್ತಃ । ಪ್ರಾಕೃತಸ್ಯೈವ ತದ್ಧೇತುತ್ವಾತ್ । ಪರಿಭವತಿ ಸರ್ವಂ ವಶೀಕರೋತೀತಿ ಪರಿಭೂಃ, ಸರ್ವತೋ ವರ ಇತ್ಯರ್ಥಃ । ಸ್ವಯಮೇವ ಪರಮನಪೇಕ್ಷ್ಯ ಭವತೀತಿ ಸ್ವಯಂಭೂಃ, ಸದಾಽನನ್ಯಾಶ್ರಯಃ । ಶಾಶ್ವತೀಭ್ಯಃ ಸಮಾಭ್ಯ ಇತಿ ಪಂಚಮೀ ಸಪ್ತಮ್ಯರ್ಥೇ ।

Rarest Archiver

**ಅನಾದ್ಯನಂತಸಂವತ್ಸರೇಷು ಯಾಥಾತಥ್ಯತೋ ಯಾಥಾರ್ಥ್ಯೇನ ವರ್ತಮಾನಾನರ್ಥಾನ್ ವ್ಯದಧಾತ್ ನಿರ್ಮಮೇ । ಯಾಥಾತಥ್ಯತ ಇತ್ಯುಕ್ತ್ಯಾ ಬ್ರಹ್ಮವಿವರ್ತತ್ವಾದರ್ಥಾನಾಂ ನ ತತ್ಸೃಷ್ಟೌ ದೇಹಾದ್ಯಪೇಕ್ಷೇತಿ ಚೋದ್ಯಂ ನಿರಸ್ತಮ್ । ಶಾಶ್ವತೀಭ್ಯಃ ಸಮಾಭ್ಯ ಇತ್ಯುಕ್ತ್ಯಾ ಸದಾ ದೇಹಹೀನಸ್ಯಾಪಿ ಸೃಷ್ಟಿಸಮಯೇ ದೇಹೋಪಾದಾನೇನಾಸ್ತು ಸೃಷ್ಟಿರಿತಿ ಚೋದ್ಯಂ ನಿರಸ್ತಂ ಧ್ಯೇಯಮ್ । ಸೃಷ್ಟ್ಯಾದಿಪ್ರವಾಹಸ್ಯಾನಾದ್ಯನಂತಕಾಲೀನತ್ವಾದಿತಿ ॥ 8 ॥**

ಪರಮಾತ್ಮನನ್ನು ತಿಳಿದ ಮಾತ್ರದಿಂದಲೇ ಮೋಹ ಶೋಕಗಳು ತೊಲಗಿ ಜೀವಾತ್ಮನು ತನ್ನನ್ನು ತಾನು ಕಾಪಾಡಿಕೊಳ್ಳಲು ಇಷ್ಟ ಪಡುವುದಿಲ್ಲ ಎಂದು ಹಿಂದೆ ಹೇಳಲಾಗಿದೆ. ಇದಕ್ಕೆ ಕಾರಣವೇನು? ಲೋಕದಲ್ಲಿ ಯಾವನೋ ಒಬ್ಬ ಉದಾರನಾದ ರಾಜ ಮುಂತಾದವರನ್ನು ತಿಳಿದ ಮಾತ್ರದಿಂದಲೇ ಮೋಹಶೋಕಾದಿಗಳು ನಾಶವಾಗುವುದು ಕಂಡಿಲ್ಲವಷ್ಟೇ ಎಂಬ ಪ್ರಶ್ನೆಗೆ ಉತ್ತರವನ್ನಾಗಿ ಸ ಪರ್ಯಗಾತ್ ಎಂಬ ಎಂಟನೇ ಮಂತ್ರವನ್ನು ಹೇಳುತ್ತಾರೆ. ಆ ಜ್ಞಾನಿಯು ಪರಬ್ರಹ್ಮವನ್ನು ಹೊಂದಿದ್ದಾನೆ. ಆದುದರಿಂದ ಅವನಿಗೆ ಮೋಹ ಶೋಕಾದಿಗಳು ಇರುವುದಿಲ್ಲ. ಆದರೆ ಪರಮಾತ್ಮನನ್ನು ಹೊಂದಿದ ಮಾತ್ರದಿಂದ ಶೋಕ ಮೋಹಾದಿಗಳು ಇಲ್ಲದಿರುವುದು ಹೇಗೆ ? ಲೋಕದಲ್ಲಿ ಯಾವ ಮಹಾರಾಜಾಧಿರಾಜನನ್ನು ಅಖಂಡಭೂಮಂಡಲ-ಚಕ್ರವರ್ತಿಯನ್ನು ನೋಡಿದವನಿಗೆ ಅವನ ಹತ್ತಿರಕ್ಕೆ ಹೋದವನಿಗೆ ಶೋಕ ಮೋಹಾದಿ ಸಮಸ್ತದೋಷಗಳು ಶಾಶ್ವತವಾಗಿ ದೂರವಾಗುವುದು ಕಂಡಿಲ್ಲವಲ್ಲ ಎಂಬ ಆಕ್ಷೇಪಕ್ಕೆ ಉತ್ತರವನ್ನು ಈ ಮಂತ್ರದಲ್ಲಿಯೇ ಹೇಳುತ್ತಾರೆ. ಆ ಪರಬ್ರಹ್ಮವು ಶುಕ್ರ ಎಂದು ಹೇಳಲ್ಪಡುತ್ತದೆ. ಶುಕ್ರವೆಂದರೆ ಶುಚಂ ಶೋಕಂ ರಹತಿ ತ್ಯಜತಿ ಶುಚ್ ಎಂದರೆ ದುಃಖವನ್ನು ಸರ್ವದಾ ಅನಾದ್ಯನಂತಕಾಲದವರೆಗೂ ರಹತಿ ಬಿಟ್ಟು ಬಿಟ್ಟಿದೆ ಎಂಬ ವ್ಯುತ್ಪತ್ತಿಯಿಂದ ಸರ್ವದಾ ಶೋಕರಹಿತವಾದುದು ಮತ್ತು ಅಕಾಯಂ ಎಂದರೆ ಲಿಂಗದೇಹರಹಿತವಾದುದು. ಮತ್ತು ಅವ್ರಣಂ ಎಂದರೆ ಕಾಲದ ದೃಷ್ಟಿಯಿಂದ ಅಲ್ಪತ್ವರಹಿತವಾದುದು ಎಂದರೆ ಸರ್ವಕಾಲದಲ್ಲಿಯೂ ಇರುವುದರಿಂದ ನಿತ್ಯವಾದುದು ಮತ್ತು ಗುಣಗಳ ದೃಷ್ಟಿಯಿಂದ ಅಲ್ಪತ್ವವಿಲ್ಲದಿರುವುದರಿಂದ ಅವ್ರಣ ಎಂದರೆ ಪೂರ್ಣವಾದುದು. ಹೀಗೆ ನಿತ್ಯವಾಗಿಯೂ ಗುಣಪೂರ್ಣವಾಗಿಯೂ ಇರುವುದೇ ಪರಬ್ರಹ್ಮವು. ಇಂತಹ ಪರಬ್ರಹ್ಮವು ಅಸ್ನಾವಿರ ಎಂದರೆ ಸ್ನಾಯು ಮುಂತಾದ ಚರ್ಮ ಮಾಂಸ ಮುಂತಾದ ಸಪ್ತಧಾತುಮಯವಾದ ಸ್ಥೂಲದೇಹ ರಹಿತವಾದ ಪರಬ್ರಹ್ಮವನ್ನು ಅಸ್ನಾವಿರ ಎಂದು ಹೇಳುತ್ತಾರೆ. ಅದು ತನ್ನ ಸಂಪರ್ಕಕ್ಕೆ ಬರುವವರಿಗೆ ಪವಿತ್ರತೆಗೆ ಕಾರಣವಾದುದರಿಂದ ಶುದ್ಧ ಎನಿಸಿಕೊಂಡಿದೆ. ಶುದ್ಧವಾಗಿರುವುದರಿಂದಲೆ ಪಾಪಸಂಬಂಧವಿಲ್ಲದುದು (ಅಪಾಪವಿದ್ಧಂ) ಆ ಕಾರಣದಿಂದಲೇ ಪಾಪಮೂಲಕವಾದ ಸ್ಥೂಲದೇಹಸೂಕ್ಷ್ಮ ದೇಹರಹಿತವಾದುದು. ಹೀಗೆ ಮೇಲೆ ಹೇಳಿದ ಅಕಾಯಂ ಇತ್ಯಾದಿ ವಿಶೇಷಣಗಳಿಂದ ಆ ಪರಬ್ರಹ್ಮವು ದೇಹ ನಿಮಿತ್ತಕವಾದ ಎಲ್ಲಾ ವಿಧಗಳಾದ ಶೋಕ ಮೋಹಾದಿಗಳಿಂದ ಬಹಳ ದೂರವಾಗಿದೆ. ಇಂತಹವನೇ ಶ್ರೀಹರಿಯು. ಜ್ಞಾನಿಯು ಇಂತಹ ಪರಮಾತ್ಮನನ್ನು ಹೊಂದಿರುವುದರಿಂದ ಪರಮಾತ್ಮನಿ-ಗಿರುವಂತೆಯೇ ಜ್ಞಾನಿಗೂ ಶೋಕಮೋಹಾದಿಗಳ ಅಭಾವವು ಯುಕ್ತವಾಗಿದೆ. ಪರಮಾತ್ಮನ ಸಾರೂಪ್ಯವೇ ಮೋಕ್ಷವು. ಪರಮಾತ್ಮನಲ್ಲಿ ಶೋಕಮೋಹಾದಿಗಳು ಇಲ್ಲದಿರುವಾಗ ಅವನನ್ನು ಹೊಂದಿದ ಭಕ್ತನಿಗೂ ಶೋಕಮೋಹಾದಿ ಅಭಾವವೆಂಬ ಸಾರೂಪ್ಯವು ಉಂಟಾಗುತ್ತದೆ.

ಹೀಗೆ ಜಗತ್ತನ್ನು ಸೃಷ್ಟಿಮಾಡುವ ಪರಬ್ರಹ್ಮಸ್ವರೂಪಿಯಾದ ಶ್ರೀಹರಿಯು ಶರೀರರಹಿತನಾದರೆ ಜಗತ್ತನ್ನು ಸೃಷ್ಟಿಮಾಡಲಾರನು. ಲೋಕದಲ್ಲಿ ಶರೀರದಿಂದ ಕೂಡಿರುವ ಕುಂಬಾರ ನೇಕಾರ ಮುಂತಾದವರೇ ಸೃಷ್ಟಿಮಾಡುವುದು ಕಂಡಿದೆ. ಪರಮಾತ್ಮನಿಗೆ ದೇಹವಿಲ್ಲವಾದರೆ ಅವನು ಸೃಷ್ಟಿಮಾಡುವುದು ಹೇಗೆ ಎಂಬ ಸಂದೇಹಕ್ಕೆ ಪರಿಹಾರಕವಾಗಿ

Rarest Archiver

ಮುಂದಿನ ವಿಶೇಷಣಗಳನ್ನು ಹೇಳುತ್ತಾರೆ. ಆ ಪರಮಾತ್ಮನು ಕವಿಯು. ಎಂದರೆ ಸರ್ವಜ್ಞನು. ಮನೀಷಿಯಯು ಚೇತನಪ್ರಕೃತಿಯಾದ ಮಹಾಲಕ್ಷ್ಮಿಯಿಂದ ಆರಂಭಿಸಿ ಇರುವ ಸಮಸ್ತ ದೇವತೆಗಳ ಮನಸ್ಸಿಗೂ ನಿಯಾಮಕನು. ಹೀಗೆ ಸರ್ವಜ್ಞನೂ ಸಮಸ್ತಚೇತನರ ಜ್ಞಾನಗಳಿಗೆ ನಿಯಾಮಕನೂ ಆದ ಪರಮಾತ್ಮನಿಗೆ ಜ್ಞಾನವಿರುವಲ್ಲಿ ಜೊತೆಗೇ ಇರಬೇಕಾದ ದೇಹವು ಜ್ಞಾನರೂಪವೇ ಆಗಿದೆ ಎಂದು ನಾವು ತಿಳಿದುಕೊಳ್ಳಬೇಕು. ಹಿಂದೆ ಹೇಳಿದಂತೆ ರಕ್ತಮಾಂಸಾದಿಯುಕ್ತವಾದ ದೇಹವಿಲ್ಲದಿರುವ ಪರಮಾತ್ಮನಿಗೆ ಜ್ಞಾನದ ಜೊತೆಗೆ ಇರುವ ದೇಹವು ಅಪ್ರಾಕೃತವಾದ ಜ್ಞಾನವೇ ಆಗಿದೆ ಎಂದು ಸಿದ್ಧಿಸುತ್ತದೆ. ಆದುದರಿಂದ ದೇಹನಿಮಿತ್ತಕವಾದ ಶೋಕಮೋಹಾದಿಗಳು ಅವನಿಗಿಲ್ಲ ಎಂಬುದು ಸಿದ್ಧವಾಯಿತು. ಪ್ರಾಕೃತ ದೇಹವೇ ಶೋಕಮೋಹಾದಿಗಳಿಗೆ ಕಾರಣವಾಗುತ್ತದೆ.

ಆ ಪರಮಾತ್ಮನು ಪರಿಭವತಿ ಸರ್ವಂ ವಶೀಕರೋತಿ ಎಲ್ಲವನ್ನು ತನಗಿಂತ ಕಡಿಮೆಯಾಗುವಂತೆ ಮಾಡಿ ತನ್ನ ಅಧೀನದಲ್ಲಿ ಇಟ್ಟುಕೊಳ್ಳುತ್ತಾನೆ ಎಂಬ ವಿವರಣದಿಂದ ಪರಿಭೂಃ ಎನ್ನಿಸಿಕೊಳ್ಳುತ್ತಾನೆ. ಸರ್ವತೋ ವರಃ ಎಲ್ಲರಿಗಿಂತಲೂ ಶ್ರೇಷ್ಠ ಎಂದು ಹೇಳಲ್ಪಡುತ್ತಾನೆ. ಅವನು ಸ್ವಯಂಭೂಃ, ಅಂದರೆ ಇನ್ನೊಬ್ಬರನ್ನು ಅಪೇಕ್ಷಿಸದೆ ತನ್ನ ಸಾಮರ್ಥ್ಯದಿಂದಲೇ ತಾನಿರುತ್ತಾನೆ. ಅಂದರೆ ಸದಾ ಅನನ್ಯಾಶ್ರಯನು ಯಾವಾಗಲೂ ಇನ್ನೊಬ್ಬರನ್ನು ಆಶ್ರಯಿಸದೇ ತನ್ನ ಮಹಿಮೆಯಲ್ಲಿಯೇ ತಾನು ಆಶ್ರಯಿಸಿರುವನು. ಇಂತಹ ಪರಮಾತ್ಮನು ಅನಾದ್ಯನಂತ ಕಾಲಗಳಲ್ಲಿ ಪರಮಸತ್ಯವಾಗಿ ಇರುವ ಮಹತ್ತತ್ತ್ವಾದಿ ಸಮಸ್ತ ಅರ್ಥಗಳನ್ನು ನಿರ್ಮಾಣ ಮಾಡಿದ್ದಾನೆ; ಮುಂದೆಯೂ ನಿರ್ಮಿಸುತ್ತಾನೆ. ಲೋಕದಲ್ಲಿ ಬ್ರಹ್ಮವೊಂದೇ ಸತ್ಯ ಜಗತ್ತು ಆ ಬ್ರಹ್ಮದ ವಿವರ್ತ (ಅಪಾರಮಾರ್ಥಿಕವಾದ ಪ್ರತಿಭಾಸ.) ಕಪ್ಪೆಚಿಪ್ಪಿನಲ್ಲಿ ಬೆಳ್ಳಿ ಎಂಬ ಭ್ರಾಂತಿಯಂತೆ ಬ್ರಹ್ಮನಲ್ಲಿ ಇಲ್ಲದಿರುವ ಜಗತ್ತು ಅವಿದ್ಯೆಯಿಂದ ಇದ್ದಂತೆ ತೋರುತ್ತದೆ. ಇಂತಹ ಸೃಷ್ಟಿಯನ್ನು ಮಾಡುವುದಕ್ಕೆ ದೇಹಾದಿಗಳ ಅಪೇಕ್ಷೆಯಿಲ್ಲ ಎಂಬ ಮಾಯಾವಾದಿಗಳ ಸಿದ್ಧಾಂತವು ಈ ಮೇಲಿನ ಹೇಳಿಕೆಯಿಂದ ನಿರಸ್ತವಾಯಿತು. ಏಕೆಂದರೆ ಜಗತ್ತು ಕುಂಬಾರ ಮುಂತಾದವರಿಂದ ಗಡಿಗೆ ಮುಂತಾದುದು ಸೃಷ್ಟಿಯಾಗುವಂತೆ ಪರಮ ಸತ್ಯವಾಗಿಯೇ ಸೃಷ್ಟಿಯಾಗಿದೆ. ಗಡಿಗೆ ಮುಂತಾದುದು ಪ್ರಯೋಜನಕ್ಕೆ ಬರುವಂತೆ ಜ್ಞಾನಿಗೆ ದೇಹ ಇಂದ್ರಿಯ ಮುಂತಾದ ಸಾಧನವನ್ನು ಒದಗಿಸುವುದರಿಂದ ಸಾರ್ಥಕವಾಗಿಯೂ ಇದೆ.

ಕೆಲವರು ಪರಮಾತ್ಮನು ಯಾವಾಗಲೂ ದೇಹರಹಿತನಾಗಿರುತ್ತಾನೆ. ಆದರೆ ಸೃಷ್ಟಿಸಮಯದಲ್ಲಿ ಮಾತ್ರ ಅವನು ತಾತ್ಕಾಲಿಕವಾದ ದೇಹವನ್ನು ಸ್ವೀಕರಿಸುತ್ತಾನೆ ಆದುದರಿಂದ ಅವನು ಸರ್ವದಾ ಅಕಾಯನು ದೇಹರಹಿತನು ಎಂದು ಹೇಳುತ್ತಾರೆ. ಈ ವಾದವನ್ನು ಶಾಶ್ವತೀಭ್ಯಃ ಸಮಾಭ್ಯಃ ಅರ್ಥಾನ್ ವ್ಯದಧಾತ್. ಅನಾದ್ಯನಂತಕಾಲಗಳಲ್ಲಿ ಸೃಷ್ಟ್ಯಾದಿ-ಪ್ರವಾಹವು ನಡೆದು ಬರುತ್ತಿರುವುದರಿಂದ ಸೃಷ್ಟಿ ಇಲ್ಲದಿರುವ ಒಂದು ಕ್ಷಣವೂ ಇಲ್ಲ. ಆದುದರಿಂದ ಪರಮಾತ್ಮನು ದೇಹರಹಿತನಾಗಿ ಇರಲು ಹೇಗೆ ಸಾಧ್ಯ ಮತ್ತು ಅವನ ದೇಹವು ಹಿಂದೆ ಹೇಳಿದ ರೀತಿಯಿಂದ ಜ್ಞಾನಾನಂದಸ್ವರೂಪವೇ ಆಗಿರುವುದರಿಂದ ಅದು ಇಲ್ಲದಿರುವ ಸಮಯವು ಯಾವುದು? ಹೀಗೆ ಎಂಟನೆಯ ಮಂತ್ರವು ಪರಮಾತ್ಮನ ದೇಹಸ್ವರೂಪ, ಅದರಿಂದಾಗುವ ಕಾರ್ಯ ಇವುಗಳನ್ನು ಬಹಳ ಯುಕ್ತಿಯುಕ್ತವಾಗಿ ಸಂಕ್ಷಿಪ್ತವಾಗಿ ಪ್ರತಿಪಾದಿಸುತ್ತದೆ.

**ವಿಜಾನತೋಽನುಪಶ್ಯತ ಇತ್ಯತ್ರ ಯಥಾವತ್ಪರಮಾತ್ಮಜ್ಞಾನಂ ಮುಕ್ತಿಹೇತುರಿತ್ಯುಕ್ತಮ್ । ತದ್ ಜ್ಞಾನಂ ಮಿಥ್ಯಾಜ್ಞಾನನಿಂದಾಸಮುಚ್ಚಿತಮೇವ ಮುಕ್ತಿಹೇತುರ್ನ ಕೇವಲಮ್ ಇತ್ಯಾಹ ಅಂಧಂತಮ ಇತ್ಯಾದಿ ಮಂತ್ರತ್ರಯೇಣ ।**

Rarest Archiver

ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾꣳ ರತಾಃ ॥ 9 ॥

ತತ್ರ ತಾವದ್ಯಥಾವಜ್‌ಜ್ಞಾನಸ್ಯೇವಾನ್ಯಥಾಜ್ಞಾನನಿಂದನಸ್ಯಾಽವಶ್ಯಕತ್ವೋಪಪಾದನಾಯಾನ್ಯಥಾಜ್ಞಾನಸ್ಯ ಪ್ರಾಗುಕ್ತಮಸುರ್ಯಲೋಕಸಾಧನತ್ವಮನೂದ್ಯಾನ್ಯಥಾಜ್ಞಾನಾನಿಂದನಸ್ಯ ತತೋಽಧಿಕಾನರ್ಥಹೇತುತ್ವಮಾದ್ಯೇನ ಮಂತ್ರೇಣೋಚ್ಯತೇ । ಅತ್ರಾವಿದ್ಯಾಶಬ್ದೇನ ವಿದ್ಯಾವಿರೋಧಿಮಿಥ್ಯಾಜ್ಞಾನವಾಚಿನಾ ತದ್ವಿಷಯೋಽನ್ಯಥಾಪ್ರಕಾರೋ ಗ್ರಾಹ್ಯಃ । ತಥಾ ಚಾವಿದ್ಯಾಂ ಯಥಾವದಾಕಾರಾದನ್ಯಥಾಕಾರಮುಪಾಸತೇ ಧ್ಯಾಯಂತಿ ಯೇ ತೇಽಂಧಂತಮಃ ಪ್ರವಿಶಂತೀತ್ಯುಕ್ತಾನುವಾದಃ । ಯೇ ವಿದ್ಯಾಯಾಂ ಉ ತತ್ವಜ್ಞಾನ ಏವ ರತಾಃ । ಮಿಥ್ಯಾಜ್ಞಾನಾನಿಂದಕಾಃ ಇತ್ಯೇವಕಾರಾರ್ಥಃ । ತೇ ತತೋ ಮಿಥ್ಯಾಜ್ಞಾನಿಪ್ರಾಪ್ಯತಮಸೋ ಭೂಯಃ ಅಧಿಕಂ ತಮಃ, ಇವಶಬ್ದಸ್ಯ ವ್ಯಕ್ತಮಿತ್ಯರ್ಥಃ, ಅಸಂಶಯಮಿತಿ ಯಾವತ್, ಪ್ರವಿಶಂತೀತ್ಯನ್ವಯಃ ॥ 9 ॥

ನ ಕೇವಲಂ ವಿಪಕ್ಷೇ ಅನರ್ಥಪ್ರಾಪ್ತೇರೇವ ಸಮ್ಯಗ್‌ಜ್ಞಾನಾಸಮ್ಯಗ್‌ಜ್ಞಾನನಿಂದನಯೋಃ ಕಾರ್ಯತ್ವಮ್ । ಕಿಂತು ಮೋಕ್ಷಫಲಸ್ಯ ಅಂಶತಃ ಉಭಯಸಾಧ್ಯತ್ವಾದಪಿ ದ್ವಯೋಃ ಕಾರ್ಯತ್ವಮಿತ್ಯಾಹ - ಅನ್ಯದೇವೇತಿ ।

ಅನ್ಯದೇವಾಹುರ್ವಿದ್ಯಯಾ ಅನ್ಯದಾಹುರವಿದ್ಯಯಾ ।
ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ ವಿಚಚಕ್ಷಿರೇ ॥ 10 ॥

ವಿದ್ಯಯಾ ತತ್ವಜ್ಞಾನೇನಾನ್ಯದೇವ ಮೋಕ್ಷೈಕದೇಶರೂಪಂ ಫಲಂ ಪ್ರಾಪ್ಯಮಾಹುರ್ವೃದ್ಧಾಃ, ಅವಿದ್ಯಯಾ ಅನ್ಯಥಾಜ್ಞಾನನಿಂದಯಾ ಚೇತಿ ಯಾವತ್ ಅನ್ಯದೇವ ಮೋಕ್ಷೈಕದೇಶಲಕ್ಷಣಂ ಫಲಂ ಪ್ರಾಪ್ಯಮಾಹುರ್ವೃದ್ಧಾಃ ಇತಿ ಇತ್ಯೇವಂ ವೃದ್ಧವಚನಸಮ್ಮತಿಯುಕ್ತಂ ವಚನಂ ಧೀರಾಣಾಂ ಧೀಮತಾಂ ಸಕಾಶಾತ್ ಶುಶ್ರುಮ ಶ್ರುತವಂತಃ ಸ್ಮಯೇ ಧೀರಾ ನೋಽಸ್ಮಾಕಂ ಮೋಕ್ಷಸಾಧನಂ ವಿಚಚಕ್ಷಿರೇ ವ್ಯಾಚಚಕ್ಷಿರೇ ಅತೋ ದ್ವಯಮಪ್ಯಾವಶ್ಯಕಮಿತಿ ಭಾವಃ ।

ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮೈವಾಭೂದ್ ವಿಜಾನತಃ ಎಂಬಲ್ಲಿ ವಿಜಾನತಃ ಎಂಬ ಶಬ್ದಕ್ಕೂ ತತ್ರ ಕೋ ಮೋಹಃ ಕಃ ಶೋಕಃ ಏಕತ್ವಂ ಅನುಪಶ್ಯತಃ ಎಂಬಲ್ಲಿಯೂ ಯಥಾವತ್ತಾಗಿ ಪರಮಾತ್ಮನ ಜ್ಞಾನವನ್ನು ಪಡೆಯುವುದೇ ಮುಕ್ತಿಗೆ ಕಾರಣವು ಎಂದು ಹಿಂದೆ ಹೇಳಿದೆ. ಆ ಜ್ಞಾನವು ಮಿಥ್ಯಾಜ್ಞಾನದ ನಿಂದೆಯಿಂದ ಸಹಿತವಾಗಿದ್ದಾಗ ಮಾತ್ರವೇ ಮುಕ್ತಿಗೆ ಕಾರಣವಾಗುತ್ತದೆ. ಕೇವಲವಾಗಿ ಅಂದರೆ ಮಿಥ್ಯಾಜ್ಞಾನನಿಂದಾ ರಹಿತವಾಗಿದ್ದಾಗ ಮುಕ್ತಿಗೆ ಕಾರಣವಾಗುವುದಿಲ್ಲ ಎಂಬ ವಿಷಯವನ್ನು ಅಂಧಂ ತಮಃ ಎಂಬ ಒಂಬತ್ತನೆಯ ಮಂತ್ರದಲ್ಲಿ ಹೇಳುತ್ತಾರೆ. ಮೊಟ್ಟ ಮೊದಲು ಯಥಾರ್ಥಜ್ಞಾನವು ಹೇಗೆ ಅತ್ಯಾವಶ್ಯಕವೋ ಹಾಗೆಯೇ ಅನ್ಯಥಾಜ್ಞಾನನಿಂದೆಯೂ ಅತ್ಯಾವಶ್ಯಕ ಎಂಬುದನ್ನು ಸಮರ್ಥಿಸುವುದಕ್ಕೋಸ್ಕರ ಅನ್ಯಥಾಜ್ಞಾನವು ಮಹಾದುಃಖ ಹೇತುವಾದ ಅಸುರ್ಯಲೋಕಪ್ರಾಪ್ತಿಗೆ ಸಾಧನವು ಎಂಬುದನ್ನು ಹೇಳುತ್ತಾ

Rarest Archiver

ಅನ್ಯಥಾಜ್ಞಾನವನ್ನು ನಿಂದಿಸದೇ ಇರುವುದು ಅನ್ಯಥಾಜ್ಞಾನಕ್ಕಿಂತಲೂ ಹೆಚ್ಚು ಅನರ್ಥಕ್ಕೆ ಕಾರಣವಾಗಿದೆ ಎಂದು ಈ ಮಂತ್ರದಲ್ಲಿ ಹೇಳುತ್ತಾರೆ.

ಇಲ್ಲಿರುವ ಅವಿದ್ಯಾ ಶಬ್ದದಿಂದ ವಿದ್ಯೆಗೆ ವಿರೋಧಿಯಾದ ಮಿಥ್ಯಾಜ್ಞಾನವಿಷಯವಾದ ಅನ್ಯಥಾ ಪ್ರಕಾರವನ್ನು ತೆಗೆದುಕೊಳ್ಳಬೇಕು. ಈಗ ಈ ಮಂತ್ರದ ಅರ್ಥವು ಹೀಗೆ ಆಗುತ್ತದೆ. ಯಾರು ಯಾಥಾರ್ಥವಾದ ಪ್ರಕಾರಕ್ಕಿಂತ ಬೇರೆ ಪ್ರಕಾರವನ್ನು ಉಪಾಸನೆ ಮಾಡುತ್ತಾರೋ ಅಂತಹವರು ಅಂಧಂತಮಸ್ಸು ಎಂಬ ನರಕವನ್ನು ಹೊಂದುತ್ತಾರೆ. ಈ ವಿಷಯವನ್ನು ಹಿಂದೆಯೆ ಹೇಳಿದೆ. ಅದನ್ನು ಅನುವಾದ ಮಾಡಿ ಹೊಸ ವಿಷಯವನ್ನು ಹೇಳುತ್ತಾರೆ. ಯಾರು ವಿದ್ಯೆ-ಯಲ್ಲಿಯೇ ಅಂದರೆ ತತ್ವಜ್ಞಾನದಲ್ಲಿಯೇ ಆಸಕ್ತರಾಗಿರುತ್ತಾರೋ ಅವರು ಕೇವಲ ಮಿಥ್ಯಾಜ್ಞಾನಿಗಳಿಂದ ಹೊಂದಲ್ಪಡುವ ತಮಸ್ಸಿಗಿಂತಲೂ ಹೆಚ್ಚಾದ ತಮಸ್ಸನ್ನು ಹೊಂದುತ್ತಾರೆ. ಇತರರ ಮಿಥ್ಯಾಜ್ಞಾನವನ್ನು ನಿಂದಿಸದೆ ತತ್ವಜ್ಞಾನ ಸಂಪಾದನೆಯಲ್ಲಿ ಮಾತ್ರ ಆಸಕ್ತರಾಗಿರುವವರು ಮಿಥ್ಯಾಜ್ಞಾನಿಗಳು ಹೊಂದುವ ಬಹುದುಃಖಪ್ರದವಾದ ನರಕಕ್ಕಿಂತಲೂ ಹೆಚ್ಚು ದುಃಖವನ್ನುಂಟು ಮಾಡುವ ಸ್ಥಳಕ್ಕೆ ಹೋಗುತ್ತಾರೆ. ಈ ವಿಷಯವು ಶಾಸ್ತ್ರದಲ್ಲಿ ಸ್ಪಷ್ಟವಾಗಿದೆ. ಇದರಲ್ಲಿ ಸಂಶಯವನ್ನು ತಾಳಬಾರದು. ಒಟ್ಟಿನಲ್ಲಿ ತತ್ವಜ್ಞಾನವನ್ನು ಸಂಪಾದಿಸುವಂತೆಯೇ ತನ್ನಲ್ಲಿರುವ ಅನ್ಯಥಾಜ್ಞಾನವನ್ನು, ಯೋಗ್ಯರಾದ ತನ್ನ ಸಂಬಂಧಿಗಳಲ್ಲಿ ಇರುವ ಅನ್ಯಥಾಜ್ಞಾನವನ್ನೂ ಹೋಗಲಾಡಿಸಿ ಪರಮಾತ್ಮನನ್ನು ಶಾಸ್ತ್ರೋಕ್ತವಾಗಿ ಉಪಾಸಿಸಬೇಕು ಎಂದು ತಾತ್ಪರ್ಯ.

**ಏತನ್ಮಂತ್ರಾರ್ಥಮೇವ ವ್ಯಕ್ತಮಾಹ - ವಿದ್ಯಾಂ ಚೇತಿ ।**

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯꣳ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥ 11 ॥**

**ವಿದ್ಯಾಂ ವಿಷ್ಣುಯಾಥಾತ್ಮ್ಯಜ್ಞಾನಮ್ । ಅವಿದ್ಯಾಂ ಮಿಥ್ಯಾಜ್ಞಾನನಿಂದನಂ, ಚಶಬ್ದಾವಿತರೇತರ-ಯೋಗೇ । ಸಹ ಏಕಪುರುಷಾರ್ಥಹೇತುತ್ವೇನ । ತದುಭಯಂ ಯೋ ವೇದ । ಸ ಇತಿ ಶೇಷಃ । ಅವಿದ್ಯಯಾ ಅನ್ಯಥಾಜ್ಞಾನನಿಂದಯಾ ಮೃತ್ಯುಂ ದುಃಖಾಜ್ಞಾನಾದ್ಯನಿಷ್ಟಂ ತೀರ್ತ್ವಾ, ವಿದ್ಯಯಾ ವಿಷ್ಣು-ಯಾಥಾತ್ಮ್ಯಜ್ಞಾನೇನ ಅಮೃತಮ್ ಆನಂದಾನುಭವಲಕ್ಷಣಮೋಕ್ಷೈಕದೇಶಮ್ ಅಶ್ನುತೇ ಪ್ರಾಪ್ನೋತಿ । ಅನಿಷ್ಟನಿವೃತ್ತೇರ್ಮಿಥ್ಯಾಜ್ಞಾನನಿಂದನಸಾಮರ್ಥ್ಯಲಭ್ಯತ್ವಾತ್ ಆನಂದಾನುಭವಸ್ಯ ಚ ತತ್ತ್ವಜ್ಞಾನ-ಸಾಮರ್ಥ್ಯಲಭ್ಯತ್ವಾದ್ದಲದ್ವಯಯುಕ್ತಮೋಕ್ಷ ಪ್ರಾಪ್ತಯೇ ದ್ವಯಮಪ್ಯಾವಶ್ಯಕಮೇವೇತ್ಯುಕ್ತಂ ಭವತಿ ॥**

ಈ ಮಂತ್ರಾರ್ಥವನ್ನು ಸ್ಪಷ್ಟವಾಗಿ ಹೇಳುತ್ತಾರೆ ಶ್ರೀಮನ್ನಾರಾಯಣನ ಯಥಾರ್ಥವಾದ ಸ್ವರೂಪಜ್ಞಾನವೇ ವಿದ್ಯೆಯು ಆ ಪರಮಾತ್ಮನಿಗೂ ಜೀವಾತ್ಮನಿಗೂ ಅಭೇದವನ್ನು ಹೇಳುವುದು ಅವನಿಂದ ಸೃಷ್ಟವಾದ ಈ ಪ್ರಪಂಚವನ್ನು ಮಿಥ್ಯಾ ಎಂದು ಹೇಳುವುದು ಇತ್ಯಾದಿಗಳೆಲ್ಲವೂ ಅವಿದ್ಯೆಯು. ಈ ವಿದ್ಯೆಯ ಸಂಪಾದನದ ಅನಂತರ ಮೇಲೆ ಹೇಳಿದ ಅವಿದ್ಯೆಯ ನಿಂದೆ ಇವೆರಡೂ ಮೋಕ್ಷವೆಂಬ ಮಹಾಪುರುಷಾರ್ಥಕ್ಕೆ ಪರಸ್ಪರ ಸೇರಿಯೇ ಒಂದಕ್ಕೆ ಇನ್ನೊಂದು ಪೂರಕವಾಗಿಯೇ ಸಾಧನವಾಗುತ್ತವೆ. ಹೀಗೆ ತಿಳಿದವನು ಯಥಾರ್ಥಜ್ಞಾನಿಯು. ಅವನು ಸರಿಯಾದ ಅಧ್ಯಾತ್ಮ ಜ್ಞಾನಿಯೂ ಲೋಕಹಿತೈಷಿಯೂ ಆಗಿರುತ್ತಾನೆ. ಅಂತಹವನು ಅನ್ಯಥಾಜ್ಞಾನದ ನಿಂದೆಯನ್ನು ಮಾಡಬೇಕು. ಅದರಿಂದ

Rarest Archiver

ಅವನು ದುಃಖ, ಅಜ್ಞಾನ ಮುಂತಾದ ಅನಿಷ್ಟವನ್ನು ದಾಟುತ್ತಾನೆ. ತನ್ನ ಜೊತೆಗಿರುವ ಸಾಧಕರಿಗೂ ದುಃಖ ಅಜ್ಞಾನಾದಿಗಳನ್ನು ಪರಿಹರಿಸಲು ಅನುಕೂಲ ಮಾಡಿಕೊಡುತ್ತಾನೆ. ಹಾಗೆಯೇ ಶ್ರೀಮನ್ನಾರಾಯಣನ ಯಥಾರ್ಥಜ್ಞಾನರೂಪವಾದ ವಿದ್ಯೆಯಿಂದ ಆನಂದಾನುಭವರೂಪವಾದ ಮೋಕ್ಷವನ್ನು ಹೊಂದುತ್ತಾನೆ. ಇತರರಿಗೂ ಆ ಮೋಕ್ಷವನ್ನು ಕೊಡಿಸುತ್ತಾನೆ. ಮೋಕ್ಷದಲ್ಲಿ ಅನಿಷ್ಟ ನಿವೃತ್ತಿ ಮತ್ತು ಇಷ್ಟಪ್ರಾಪ್ತಿಗಳೆಂಬ ಎರಡು ಅಂಶಗಳಿವೆ. ಮಿಥ್ಯಾಜ್ಞಾನನಿಂದೆಯ ಸಾಮರ್ಥ್ಯದಿಂದ ಎಲ್ಲಾ ಅನಿಷ್ಟ ನಿವೃತ್ತಿ ಉಂಟಾಗುತ್ತದೆ. ತತ್ತ್ವಜ್ಞಾನದ ಸಾಮರ್ಥ್ಯದಿಂದ ಆನಂದಾನುಭವವೆಂಬ ಇಷ್ಟಪ್ರಾಪ್ತಿಯು ಆಗುತ್ತದೆ. ಹೀಗೆ ಎರಡು ದಳಗಳುಳ್ಳ ಮೋಕ್ಷವೆಂಬ ಫಲ ಪ್ರಾಪ್ತಿಗೋಸ್ಕರ ವಿದ್ಯಾಪ್ರಾಪ್ತಿ ಮತ್ತು ಅವಿದ್ಯಾನಿಂದೆ ಇವೆರಡೂ ಅತ್ಯಾವಶ್ಯಕ ಎಂದು ಹೇಳಿದಂತಾಯಿತು.

**ಮಿಥ್ಯಾಜ್ಞಾನಮನರ್ಥಹೇತುಃ ತತ್ತ್ವಜ್ಞಾನಮೇವ ಮುಕ್ತಿಹೇತುರಿತಿ ಪ್ರಾಗುಕ್ತಸ್ಯ ವಿವರಣಮ್ ಅಂಧಂತಮ ಇತ್ಯುತ್ತರಮಂತ್ರತ್ರಯೇಣ ಕ್ರಿಯತೇ ।**

**ಅಂಧಂತಮಃ ಪ್ರವಿಶಂತಿ ಯೇಽಸಂಭೂತಿಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ಸಂಭೂತ್ಯಾಂ ರತಾಃ ॥ 12 ॥**

**ತತ್ರಾದ್ಯಸ್ಯಾಯಮರ್ಥಃ । ಅಸಂಭೂತಿಂ ಜಗತ್ಸೃಷ್ಟೇರಕರ್ತಾರಂ, ಸೃಷ್ಟಿಕರ್ತಾ ನೇತ್ಯುಪಾಸತೇ ಇತ್ಯರ್ಥಃ । ಸಂಭೂತ್ಯಾಮ್, ಉ ಶಬ್ದ ಏವಾರ್ಥೋಽನೇನಾನ್ವೇತಿ । ಸಂಭೂತ್ಯಾಮ್ ಉ ಸೃಷ್ಟಿಕರ್ತೃತ್ವ ಏವ ರತಾಃ । ಭಗವಾನ್ ಸೃಷ್ಟಿಕರ್ತೈವ ನ ಸಂಹಾರಕರ್ತೇತ್ಯುಪಾಸತೇ ಇತ್ಯರ್ಥಃ । ಪ್ರಾಗ್ವದೇವಾವಶಿಷ್ಟಸ್ಯಾರ್ಥೋ ಧ್ಯೇಯಃ ॥ 12 ॥**

**ನ ಕೇವಲಂ ವಿಪಕ್ಷೇಽನರ್ಥಸತ್ತ್ವಾದೇವ ಸೃಷ್ಟಿಸಂಹಾರಯೋಃ ಕರ್ತೃತ್ವಂ ಹರೇರ್ಜ್ಞೇಯಮ್ । ಕಿಂತು ದಲದ್ವಯಯುಕ್ತಮೋಕ್ಷೋಪಯೋಗಿತ್ವಾದಪೀತ್ಯಾಹ ಅನ್ಯದೇವೇತಿ ।**

**ಅನ್ಯದೇವಾಹುಃ ಸಂಭವಾದನ್ಯದಾಹುರಸಂಭವಾತ್ ।**
**ಇತಿ ಶುಶ್ರುಮ ಧೀರಾಣಾಂ ಯೇ ನಸ್ತದ್ ವಿಚಚಕ್ಷಿರೇ ॥ 13 ॥**

**ಸಂಭವಾತ್ ಹರೇಃ ಸೃಷ್ಟಿಕರ್ತೃತ್ವಜ್ಞಾನಾತ್ । ಅಸಂಭವಾತ್ ಸಂಹಾರಕರ್ತೃತ್ವಜ್ಞಾನಾದಿತ್ಯರ್ಥಃ । ಶಿಷ್ಟಂ ಪ್ರಾಗ್ವಜ್ಜ್ಞೇಯಮ್ ॥ 13 ॥**

ಮಿಥ್ಯಾಜ್ಞಾನವು ಅನರ್ಥಕ್ಕೆ ಅಂದರೆ ನಿತ್ಯನರಕಕ್ಕೆ ಕಾರಣವಾಗುತ್ತದೆ. ತತ್ತ್ವಜ್ಞಾನವೇ ಮುಕ್ತಿಗೆ ಕಾರಣವಾಗಿರುತ್ತದೆ ಎಂದು ಹಿಂದೆ ಹೇಳಿದ ವಿಷಯದ ವಿವರಣೆಯನ್ನು ಅಂಧಂತಮಃ ಎಂದು ಮೊದಲಾದ ಉಳಿದ ಮುಂದಿನ ಮೂರು ಮಂತ್ರಗಳಿಂದ ಮಾಡುತ್ತಾರೆ. ಅವುಗಳಲ್ಲಿ ಮೊದಲನೆಯ ಮಂತ್ರಾರ್ಥವು ಹೀಗಿದೆ. ಪರಮಾತ್ಮನನ್ನು ಅಸಂಭೂತಿ ಎಂದು ಯಾರು ಉಪಾಸನೆ ಮಾಡುತ್ತಾರೋ ಅವರು ಅಂಧಂ ತಮಸ್ಸನ್ನು ಹೊಂದುತ್ತಾರೆ. ಅಸಂಭೂತಿ ಎಂದರೆ ಜಗತ್ತಿನ ಸೃಷ್ಟಿಗೆ ಕರ್ತೃವಲ್ಲದವನು ಎಂದು ಅರ್ಥ. ಪರಮಾತ್ಮನು ಜಗತ್ತಿಗೆ ಸೃಷ್ಟಿಕರ್ತ ಅಲ್ಲವೆಂದು ಉಪಾಸನೆ ಮಾಡುವವರು ಅಂಧಂತಮಸ್ಸನ್ನು ಹೊಂದುತ್ತಾರೆ.

Rarest Archiver

ಇನ್ನು ಯಾರು ಸಂಭೂತಿಯಲ್ಲಿಯೇ ಆಸಕ್ತರಾಗಿರುತ್ತಾರೋ ಅವರೂ ಪರಮಾತ್ಮನನ್ನು ಹಿಂದೆ ಹೇಳಿದಂತೆ ಅಸಂಭೂತಿ ಎಂದು ಉಪಾಸನೆ ಮಾಡುವವರಿಗಿಂತ ಹೆಚ್ಚಾದ ನಿತ್ಯನರಕವನ್ನು ಹೊಂದುತ್ತಾರೆ. ಅಂದರೆ ಭಗವಂತನು ಸೃಷ್ಟಿಕರ್ತಮಾತ್ರ ಆಗಿದ್ದಾನೆ ಎಂಬ ಜ್ಞಾನದಿಂದ ಹೊಂದುವ ಫಲವೇ ಬೇರೆಯದು. ಭಗವಂತನು ಸಂಹಾರಕರ್ತನು ಆಗಿದ್ದಾನೆ ಎಂಬ ಜ್ಞಾನದಿಂದ ಹೊಂದುವ ಫಲವೇ ಬೇರೆಯದು ಹೀಗೆ ನಾವು ನಮಗೆ ಬ್ರಹ್ಮವಿದ್ಯೋಪದೇಶವನ್ನು ಮಾಡಿರುವ ಜ್ಞಾನಿಗಳಿಂದ ಕೇಳಿ ತಿಳಿದಿದ್ದೇವೆ.

**ಏತನ್ಮಂತ್ರಾರ್ಥಮೇವ ವ್ಯಕ್ತಮಾಹ ಸಂಭೂತಿಂ ಚೇತಿ ।**

**ಸಂಭೂತಿಂ ಚ ವಿನಾಶಂ ಚ ಯಸ್ತದ್ವೇದೋಭಯಃ ಸಹ ।**
**ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥ 14 ॥**

**ಸಂಭೂತಿಂ ಸೃಷ್ಟಿಕರ್ತೃತ್ವಂ ವಿನಾಶಂ ಜಗತ್ಸಂಹಾರಕರ್ತೃತ್ವಮ್ । ಶಿಷ್ಟಂ ಪ್ರಾಗ್ವತ್ । ಸೃಷ್ಟ್ಯುಪಲಕ್ಷಿತಾನಂತಗುಣಾತ್ಮಕತ್ವಜ್ಞಾನಾದಾನಂದಾನುಭವಃ, ವಿನಾಶಕರ್ತೃತ್ವಜ್ಞಾನಾದಖಿಲಕ್ಲೇಶನಿವೃತ್ತಿರಿತ್ಯುಭಯರೂಪಮೋಕ್ಷಾಯೋಭಯಜ್ಞಾನಮಾವಶ್ಯಕಮಿತಿ ಭಾವಃ ॥ 14 ॥**

ಈ ಎರಡು ಮಂತ್ರಗಳ ಅರ್ಥವನ್ನೇ ಸ್ಪಷ್ಟವಾಗಿ ಹೇಳುತ್ತಾರೆ. ಶ್ರೀಹರಿಯು ಸೃಷ್ಟಿಕರ್ತನು ಎಂದೂ ಮತ್ತು ಜಗತ್ತಿನ ಸಂಹಾರಕಾರಣನು ಎಂದೂ ಇವೆರಡನ್ನು ಮೋಕ್ಷವೆಂಬ ಒಂದೇ ಪುರುಷಾರ್ಥಕ್ಕೋಸ್ಕರ ಯಾರು ತಿಳಿದುಕೊಳ್ಳುತ್ತಾರೋ ಅವರು ಶ್ರೀಹರಿಯ ಸೃಷ್ಟಿಕರ್ತೃತ್ವದಿಂದ ಸೂಚಿತವಾಗುವ ಅನಂತಗುಣಾತ್ಮಕತ್ವ (ಗುಣಪೂರ್ಣತ್ವ) ಜ್ಞಾನದಿಂದ ಮೋಕ್ಷದಲ್ಲಿ ತಮಗೆ ಯೋಗ್ಯವಾದ ಸ್ವರೂಪಾನಂದಾನುಭವವನ್ನು ಹೊಂದುತ್ತಾರೆ. ಪರಮಾತ್ಮನು ಸಂಹಾರಕರ್ತಾ ಎಂಬ ಜ್ಞಾನದಿಂದ ಸಮಸ್ತ ಕ್ಲೇಶಗಳ ನಿವೃತ್ತಿಯಾಗುತ್ತದೆ. ಹೀಗೆ ಸಕಲಾನಿಷ್ಟನಿವೃತ್ತಿ ಪೂರ್ವಕ ಇಷ್ಟಪ್ರಾಪ್ತಿ ಎಂಬ ಮೋಕ್ಷದಲ್ಲಿರುವ ಸಕಲಾನಿಷ್ಟ ನಿವೃತ್ತಿ ಮೊದಲನೆಯ ಅಂಶದ ಪ್ರಾಪ್ತಿಗೋಸ್ಕರ ಪರಮಾತ್ಮನು ಸಂಹಾರಕರ್ತನು ಎಂದು ಅವಶ್ಯವಾಗಿ ಉಪಾಸನೆ ಮಾಡಬೇಕು. ತನಗೆ ಇಷ್ಟವಾದ ಸುಖಜ್ಞಾನಾದಿಗಳ ಅಭಿವ್ಯಕ್ತಿಗೋಸ್ಕರ ಪರಮಾತ್ಮನು ಸೃಷ್ಟಿಕಾರಣನು ಎಂಬ ಉಪಾಸನೆಯನ್ನು ಮಾಡಬೇಕು ಎಂದು ತಾತ್ಪರ್ಯ.

**ಏವಮಾದ್ಯಮಂತ್ರದ್ವಯೇನೋಕ್ತದಿಶಾ ಪ್ರಾಪ್ತಾಧಿಕಾರಂ ಶಿಷ್ಯಂ ಪ್ರತಿ ಅನೇಜದೇಕಮಿತ್ಯಾದಿನಾ ಭಗವತ್ಸ್ವರೂಪಂ ನಿರೂಪ್ಯ 'ಯಸ್ತು ಸರ್ವಾಣಿ' ಇತ್ಯಾದಿ ಸಾರ್ಧಮಂತ್ರದ್ವಯೇನ ತತ್ಸಾಕ್ಷಾತ್ಕಾರೋ ಮೋಕ್ಷಹೇತುರಿತ್ಯುಕ್ತಮ್, ಸ ಚ ಸಾಕ್ಷಾತ್ಕಾರೋ ನ ಶ್ರವಣಾದಿಮಾತ್ರೇಣ ಕಿಂತ್ವೀಶ್ವರಪ್ರಸಾದೇನ ಭವತೀತ್ಯತೋಽನುಷ್ಠಿತಶ್ರವಣಾದಿಕೇನಾಪಿ ತತ್ಸಾಕ್ಷಾತ್ಕಾರಾರ್ಥಂ ಭಗವತ್ಪ್ರಾರ್ಥನಂ ಕಾರ್ಯಮಿತಿ ಭಾವೇನ ಪ್ರಾರ್ಥನಾಪ್ರಕಾರಮಾಹ ಹಿರಣ್ಮಯೇನೇತ್ಯಾದಿನಾ ಸ್ಮರೇತ್ಯಂತೇನ ಗ್ರಂಥೇನ ।**

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ।**
**ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥ 15 ॥**

Rarest Archiver

**ಹಿರಣ್ಮಯಮಿವ ಹಿರಣ್ಮಯಂ ಜ್ಯೋತೀರ್ಮಯಮ್ । ಪಿಬತಿ ರಸಾನ್ ತ್ರಾಯತೇ ಜಗದಿತಿ ಚ ಪಾತ್ರಂ, ತೇನ ಹಿರಣ್ಮಯೇನ ಪಾತ್ರೇಣ ಸೂರ್ಯಮಂಡಲೇನ । ಸತ್ಯಸ್ಯ ಸದ್ಗುಣಪೂರ್ಣಸ್ಯ ಸೂರ್ಯ-ಮಂಡಲಸ್ಥಸ್ಯ ತವ ಮುಖಂ, ಉಪಲಕ್ಷಣಂ ಚೈತತ್, ವಪುಃ ಸರ್ವದಾಽಪಿಹಿತಮಸ್ತಿ । ಹೇ ಪೂಷನ್ ಪೂರ್ಣ, ಪುಷ ಪುಷ್ಟಾವಿತಿ ಧಾತೋಃ । ತದ್ವಪುಃ ತ್ವಂ ಸತ್ಯಧರ್ಮಾಯ ಸತ್ಯಂ ಭಗವಂತಂ ಹೃದಯೇ ಧಾರಯತೀತಿ ವ್ಯುತ್ಪತ್ತ್ಯಾ ತ್ವದ್‌ಧ್ಯಾನಾದಿಮತೇ ಭಕ್ತಾಯ ಮಹ್ಯಂ ದೃಷ್ಟಯೇ ಮಮ ತ್ವದ್ದರ್ಶನಾರ್ಥಮ್ ಅಪಾವೃಣು ಅಪಗತಾವರಣಂ ಕುರು ॥ 15 ॥**

ಭಂಗಾರದಿಂದ ನಿರ್ಮಿತವಾದಂತಿರುವ ಜ್ಯೋತಿರ್ಮಯವಾದ ಸೂರ್ಯನ ಮಂಡಲವು ಪಾತ್ರವೆನಿಸಿಕೊಳ್ಳುತ್ತದೆ. ರಸವನ್ನೂ ಭೂಮಿಯಲ್ಲಿರುವ ಜಲಾದಿರಸಗಳನ್ನು ಪಾನ ಮಾಡುವುದರಿಂದ ಮತ್ತು ಜಗತ್ತನ್ನು ರಕ್ಷಿಸುವುದರಿಂದ ಸೂರ್ಯಮಂಡಲವನ್ನು ಪಾತ್ರವೆಂದು ಹೇಳಲಾಗಿದೆ. ಹಿರಣ್ಮಯವಾದ ಸೂರ್ಯಮಂಡಲವೆಂಬ ಪಾತ್ರದಿಂದ ಪರಮಾತ್ಮ ಸ್ವರೂಪವು ಆಚ್ಛಾದಿತವಾಗಿದೆ. ಎಲೈ ಶ್ರೀಮನ್ನಾರಾಯಣನೇ! ಸದ್ಗುಣಪೂರ್ಣನಾದುದರಿಂದ ಸತ್ಯವೆಂಬ ಹೆಸರುಳ್ಳ ನಿನ್ನ ಮುಖವು ಹಾಗೆಯೇ ಸಂಪೂರ್ಣವಾದ ಶರೀರವು ಮರೆಯಾಗಿದೆ. ಎಲೈ ಪೂರ್ಣನಾದುದರಿಂದ ಪೂಷನ್ ಎಂಬ ಹೆಸರುಳ್ಳ ಸ್ವಾಮಿಯೇ! ಹಿಂದೆ ಹೇಳಿದ ನಿನ್ನ ಶರೀರವನ್ನು, ಸತ್ಯನಾಮಕನಾದ ಭಗವಂತನನ್ನು ಹೃದಯದಲ್ಲಿ ಭಕ್ತನು ಧರಿಸುತ್ತಾನೆ (ಸತ್ಯಂ ಭಗವಂತಂ ಹೃದಯೇ ಧಾರಯತಿ) ಎಂಬ ವ್ಯುತ್ಪತ್ತಿಯಿಂದ ಸತ್ಯಧರ್ಮ ಎಂಬ ಹೆಸರಿನ ನಿನ್ನ ಧ್ಯಾನಾದಿಗಳಲ್ಲಿ ಸರ್ವದಾ ಆಸಕ್ತನಾಗಿರುವ ನನಗೆ ನಿನ್ನ ಪರಮದಿವ್ಯಸ್ವರೂಪದ ದರ್ಶನಕ್ಕೋಸ್ಕರ ನಿನ್ನ ಸ್ವರೂಪಕ್ಕೆ ಇರುವ ಆವರಣವನ್ನು ಕಳಚಿಬಿಡು.

ಹೀಗೆ ಈಶಾವಾಸ್ಯಮಿದಂ ಎಂಬ ಮೊದಲನೇ ಮಂತ್ರ ಕುರ್ವನ್ನೇವೇಹ ಎಂಬ ಎರಡನೆಯ ಮಂತ್ರಗಳಿಂದ ಹೇಳಿದ ರೀತಿಯಿಂದ ಶಿಷ್ಯನಿಗೆ ಅಧಿಕಾರವು ಪ್ರಾಪ್ತವಾದ ಮೇಲೆ ಅವನಿಗೆ ಅನೇಜದೇಕಂ ಇತ್ಯಾದಿ ಮಂತ್ರಗಳಿಂದ ಭಗವಂತನ ಸ್ವರೂಪವನ್ನು ಹೇಳಿ ಯಸ್ತು ಸರ್ವಾಣಿ ಭೂತಾನಿ ಇತ್ಯಾದಿಯಾಗಿ ಸಪರ್ಯಗಾತ್ ಶುದ್ಧಮಪಾಪವಿದ್ಧಂ ಎಂಬಲ್ಲಿ-ಯವರೆಗೆ ಎರಡೂವರೆ ಮಂತ್ರಗಳಿಂದ ಭಗವಂತನ ಸಾಕ್ಷಾತ್ಕಾರವು ಮೋಕ್ಷಕ್ಕೆ ಕಾರಣವೆಂದು ಹಿಂದೆ ಹೇಳಿದ್ದಾಯಿತು. ಆ ಸಾಕ್ಷಾತ್ಕಾರವು ಶ್ರವಣ ಮನನ ನಿಧಿಧ್ಯಾಸನಗಳೆಂಬ ಈ ಮೂರು ದ್ವಾರಗಳಿಂದ ಕೇವಲ ಆಗುವುದಿಲ್ಲ, ಪರಮಾತ್ಮನ ಪ್ರಸಾದವು ಸಾಕ್ಷಾತ್ಕಾರಕ್ಕೆ ಮುಖ್ಯವಾದ ಕಾರಣವು. ಆದುದರಿಂದ ಶ್ರವಣಾದಿಗಳನ್ನು ಮಾಡಿದ ಅಧಿಕಾರಿಯೂ ಪರಮಾತ್ಮನ ಸಾಕ್ಷಾತ್ಕಾರಕ್ಕೋಸ್ಕರ ಭಗವಂತನನ್ನು ಪ್ರಾರ್ಥಿಸಬೇಕೆಂಬ ಅಭಿಪ್ರಾಯದಿಂದ ಭಗವಂತನ ಪ್ರಾರ್ಥನಾ-ಪ್ರಕಾರವನ್ನು ಹಿರಣ್ಮಯೇನ ಪಾತ್ರೇಣ ಇತ್ಯಾದಿಯಾದ ಈ ಮಂತ್ರದಿಂದ ಆರಂಭಿಸಿ ಓಂ ಕ್ರತೋ ಸ್ಮರ ಕೃತಂ ಸ್ಮರ ಎಂಬಲ್ಲಿಯವರೆಗಿನ ಮಂತ್ರಗಳಲ್ಲಿ ಹೇಳುತ್ತಾರೆ.

**ಪೂಷನ್ ಏಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ।**
**ಸಮೂಹ ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ॥ 16 ॥**

**ಹೇ ಪೂಷನ್ ಪೂರ್ಣ, ಏಕರ್ಷೇ ಸರ್ವವಿಷಯಕತ್ವಾದಿನಾ ಪ್ರಧಾನಜ್ಞಾನವತ್ತ್ವಹೇತುನಾ ಏಕರ್ಷಿಶಬ್ದವಾಚ್ಯಃ ಸನ್ ಏಕರ್ಷ್ಯಾಖ್ಯಮುನಿಸ್ಥ । ಯಮ, ಸರ್ವನಿಯಾಮಕತಯಾ ಯಮಶಬ್ದವಾಚ್ಯಃ ಸನ್ ಯಮಾಂತರ್ಗತ । ಸೂರಿಭಿಃ ಪ್ರಾಪ್ಯತ್ವಹೇತುನಾ ಸೂರ್ಯಶಬ್ದವಾಚ್ಯಃ ಸನ್ ಸೂರ್ಯಾಂ-**

Rarest Archiver

**ತರ್ಗತ । ಪ್ರಾಜಾಪತ್ಯ ಪ್ರಜಾಪತೇರ್ಹಿರಣ್ಯಗರ್ಭಸ್ಯ ವಿಶೇಷೇಣ ಪ್ರಾಪ್ಯತಯಾ ಪ್ರಾಜಾಪತ್ಯಶಬ್ದ-ವಾಚ್ಯ । ರಶ್ಮೀನ್ ಮದೀಯಂ ಸ್ವರೂಪಜ್ಞಾನಂ ವ್ಯೂಹ ವಿಸ್ತಾರಯ । ತೇಜೋ ಬಾಹ್ಯಜ್ಞಾನಂ ಚ ಸಮೂಹ ವಿಸ್ತಾರಯೇತ್ಯರ್ಥಃ । ತೇಜ ಇತಿ ಸ್ವರೂಪಜ್ಞಾನಮ್ । ರಶ್ಮೀನಿತಿ ಬಾಹ್ಯಜ್ಞಾನಂ ವಾ । ತಥಾ ಚ ಯತ್ ತೇ ರೂಪಂ ಕಲ್ಯಾಣತಮಂ ತದ್ರೂಪಂ ತೇ ಪ್ರಸಾದಾದಹಂ ಪಶ್ಯಾಮೀತಿ । ಆದಿತ್ಯರಶ್ಮ್ಯಾ-ದೀನಾಮ್ ಅಪಗಮನಾದಿನಾ ತದಂತರ್ಗತಪ್ರತೀತ್ಯಸಂಭವಾದಾದಿತ್ಯರಶ್ಮ್ಯಾದಿವಿಷಯಂ ವ್ಯಾಖ್ಯಾನ-ಮಯುಕ್ತಮ್ ।**

ಏಕರ್ಷೇ ಸರ್ವವಿಷಯಕವಾದುದರಿಂದ ಮುಖ್ಯವಾದುದರಿಂದ ಪ್ರಧಾನಜ್ಞಾನವುಳ್ಳವನು ಎಂಬ ಅಭಿಪ್ರಾಯ-ದಿಂದ ಏಕರ್ಷಿ ಶಬ್ದಚ್ಯನಾದವನೇ ಮತ್ತು ಏಕರ್ಷಿ ಎಂಬ ಮುನಿಯಲ್ಲಿರುವವನೇ! ಸರ್ವ ನಿಯಾಮಕನಾದುದರಿಂದ ಯಮಶಬ್ದವಾಚ್ಯನಾಗಿ ಯಮನಲ್ಲಿರುವವನೇ ! ಸೂರಿಗಳಿಂದ (ಜ್ಞಾನಿಗಳಿಂದ) ಹೊಂದಲ್ಪಡುವವನಾದುದರಿಂದ ಸೂರಿ-ಶಬ್ದವಾಚ್ಯನಾಗಿ ಸೂರ್ಯಾಂತರ್ಗತನಾದವನೇ, ಪ್ರಜಾಪತಿನಾಮಕನಾದ ಹಿರಣ್ಯಗರ್ಭನಿಂದ ವಿಶೇಷವಾಗಿ ಹೊಂದಲ್ಪಡು-ವವನಾದುದರಿಂದ ಪ್ರಾಜಾಪತ್ಯ ಎಂದು ಹೇಳಲ್ಪಡುವವನೇ ನೀನು, ರಶ್ಮಿಗಳು ಎಂದರೆ ನನ್ನ ಸ್ವರೂಪ ಜ್ಞಾನವನ್ನು ವಿಸ್ತರಿಸು, ತೇಜಸ್ಸು ಎಂದರೆ ಬಾಹ್ಯ ಜ್ಞಾನವನ್ನು ವಿಸ್ತಾರಗೊಳಿಸು.

(ಇಲ್ಲಿ ತೇಜಸ್ಸು ಎಂದರೆ ಸ್ವರೂಪಜ್ಞಾನ, ರಶ್ಮಿ ಎಂದರೆ ಬಾಹ್ಯಜ್ಞಾನ ಎಂದಾದರೂ ಅರ್ಥವಿಟ್ಟುಕೊಳ್ಳಬಹುದು). ಹೀಗೇ ನನ್ನ ಬಾಹ್ಯಜ್ಞಾನ ಸ್ವರೂಪಜ್ಞಾನಗಳು ವಿಸ್ತಾರಗೊಂಡಾಗ ನಿನ್ನ ಅತ್ಯಂತಾತಿಶಯಿತ ಕಲ್ಯಾಣಸ್ವರೂಪವಾದ ಆ ರೂಪವನ್ನು ನಿನ್ನ ಅನುಗ್ರಹದಿಂದಲೇ ನಾನು ನೋಡುತ್ತೇನೆ.

ಇಲ್ಲಿ ಆದಿತ್ಯರಶ್ಮಿ ಮುಂತಾದುದು ಪಕ್ಕಕ್ಕೆ ಸರಿಯಲಿ, ಸೂರ್ಯನೇ ನಿನ್ನ ರಶ್ಮಿಗಳನ್ನು ಪಕ್ಕಕ್ಕೆ ಸರಿಸು, ಆಗ ಕಣ್ಣು ಕೋರೈಸುವ ನಿನ್ನ ಕಿರಣಗಳ ಪ್ರತಿಘಾತವಿಲ್ಲದಿರುವುದರಿಂದ ನಿನ್ನ ಕಿರಣಗಳೊಳಗೆ ಅಂತರ್ಗತವಾಗಿರುವ ಸ್ವರೂಪವನ್ನು ನಾನು ನೋಡಲು ಸಾಧ್ಯ ಎಂಬುದಾಗಿ ಆದಿತ್ಯರಶ್ಮಿ, ಆದಿತ್ಯಮಂಡಲದ ಸ್ವರೂಪ ಇದರ ವಿಷಯವಾದ ಈ ಮಂತ್ರದ ವ್ಯಾಖ್ಯಾನವು ಸರಿಯಲ್ಲವೆಂದು ಸಿದ್ಧವಾಗುತ್ತದೆ.

**ಸರ್ವಜೀವೋತ್ತಮಮುಖ್ಯವಾಯುರೂಪಪ್ರತೀಕಸ್ಥಿತ್ಯಾದಿಜ್ಞಾನಮಾವಶ್ಯಕಮಿತಿ ಭಾವೇನ ತತ್-ಸ್ಥಿತ್ಯಾದಿಕಮಾಹ- ಯ ಇತಿ ।**

**ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ 17 ॥**

**ಯೋಽಸೌ ಪ್ರಸಿದ್ಧಃ ಅಸೌ ಮುಖ್ಯಪ್ರಾಣೇ ಸ್ಥಿತ ಇತಿ ಶೇಷಃ, ಸೋಽಹೇಯತ್ವಾದಹಮಿತ್ಯುಕ್ತಃ. ಸದಾಽಸ್ತಿತ್ವೇನ ಮೇಯತ್ವಹೇತುನಾ ಅಸ್ಮೀತಿ ತಿಙ್‌ಪ್ರತಿರೂಪಕಾವ್ಯಯಪದವಾಚ್ಯಃ, ತಂ ಪಶ್ಯಾಮೀ-ತ್ಯರ್ಥಃ । ಯದ್ವಾ ಅಸಾವಸಾವಿತಿ ದ್ವಯಮಪಿ ಪ್ರಥಮಾಂತಮೇವ । ವೀಪ್ಸಾಯಾಂ ದ್ವಿರುಕ್ತಿಃ । ಪೂರ್ವಂ ಪೂಷಾದಿಶಬ್ದೈರುಪಲಕ್ಷಣತಯಾ ಪ್ರಾಣಾದ್ಯನೇಕಪ್ರತೀಕಸ್ಥತ್ವಂ ವಿಷ್ಣೋರುಕ್ತಮ್ । ತತ್ರ ಭೇದ-ಶಂಕಾಯಾಂ ಯೋಽಸಾವಿತಿ ವಾಕ್ಯಮುಚ್ಯತೇ । ಯೋಽಸಾವಸೌ ಪುರುಷಃ ಪ್ರಾಣಾದ್ಯನೇಕಪ್ರತೀಕೇಷು ಸ್ಥಿತಃ ಸೋಽಹಮಸ್ಮಿ, ಮದಂತರ್ಯಾಮಿತಯಾಽಸ್ತೀತ್ಯರ್ಥಃ ।**

Rarest Archiver

**ಸರ್ವಪ್ರತೀಕೇಷು ಮಯಿ ಚ ಸ್ಥಿತ ಏಕ ಏವೇತಿ ಫಲಿತೋಽರ್ಥಃ । ಅಹಂಪದಸ್ಯ ಪ್ರತ್ಯಗಾತ್ಮ-ಜೀವಾಂತರ್ಯಾಮಿಣಿ ಮುಖ್ಯತಯಾ ತತ್ಸಮಭಿವ್ಯಾಹಾರಾದಸ್ಮೀತ್ಯುತ್ತಮಪುರುಷಪ್ರಯೋಗೋಽಪಿ ಸಾಧುರೇವೇತಿ ಜ್ಞೇಯಮ್ ॥ 17 ॥**

ಸರ್ವಜೀವೋತ್ತಮರಾದ ಮುಖ್ಯ ವಾಯುದೇವರೆಂಬ ಪ್ರತೀಕದಲ್ಲಿ ಇದ್ದು ಶ್ರೀಹರಿಯು ಸಮಸ್ತ ಜೀವರನ್ನು ಪ್ರೇರಿಸುತ್ತಾನೆ ಎಂಬ ಜ್ಞಾನವು ಅವಶ್ಯಕವೆಂಬ ಅಭಿಪ್ರಾಯದಿಂದ ಶ್ರೀಮುಖ್ಯಪ್ರಾಣದೇವರಲ್ಲಿ ಶ್ರೀಹರಿಯು ಸನ್ನಿಹಿತ-ನಾಗಿದ್ದಾನೆ ಎಂದು ಹೇಳುತ್ತಾರೆ.

ಯಾವ ಪರಮಾತ್ಮನು ಅತ್ಯಂತ ಪ್ರಸಿದ್ಧನಾಗಿದ್ದಾನೋ ಅವನು ಮುಖ್ಯ ಪ್ರಾಣನಲ್ಲಿಯೂ ಇದ್ದಾನೆ. ಅವನು ಅಹೇಯನಾದುದರಿಂದ ಅಂದರೆ ಎಂದೂ ಯಾರಿಂದಲೂ ಬಿಟ್ಟು ಬಿಡಲು ಸಾಧ್ಯವಿಲ್ಲದಿರುವುದರಿಂದ ಅಹಂ ಎಂದು ಹೇಳಲ್ಪಟ್ಟಿದ್ದಾನೆ. ಯಾವಾಗಲೂ ಇದ್ದಾನೆ; ಸರ್ವದಾ ಅಸ್ತಿ ಎಂದು ಜ್ಞಾನಿಗಳಿಂದ ತಿಳಿಯಲು ಯೋಗ್ಯನಾದುದರಿಂದ ಅವನಿಗೆ ಅಸ್ಮಿ ಎಂದು ಹೆಸರು. ಅಸ್ಮಿ ಎಂಬುದು ಅಹಂ ಅಸ್ಮಿ ನಾನು ಇದ್ದೇನೆ ಎಂಬಲ್ಲಿರುವ ಅಸ್ಮಿ ಎಂಬ ಧಾತುರೂಪವಲ್ಲ, ಅದರಂತೆ ಇರುವ ತಿಙ್‌ಪ್ರತಿರೂಪಕವಾದ ಅವ್ಯಯವು. ಹೀಗೆ ಸರ್ವದಾ ಅಹೇಯನಾಗಿದ್ದು ಸರ್ವದಾ ಅಸ್ತಿ ಎಂಬುದಾಗಿ ತಿಳಿಯಲು ಯೋಗ್ಯವಾದ, ಅಹಮಸ್ಮಿ ಪದಗಳಿಂದ ವಾಚ್ಯವಾದ ಪರಮಾತ್ಮನ ಸ್ವರೂಪವನ್ನು ನಾನು ನೋಡುತ್ತೇನೆ ಎಂದು ಅರ್ಥ.

ಅಥವಾ ಅಸೌ ಅಸೌ ಎಂಬಲ್ಲಿರುವ ಎರಡು ಶಬ್ದಗಳು ಅಸೌ ಅಮೂ ಅಮೀ ಇವನು ಇವರಿಬ್ಬರು ಇವರು ಎಂಬ ಶಬ್ದರೂಪಗಳಲ್ಲಿ ಬರುವ ಪ್ರಥಮಾಂತವಾದ ಎರಡು ಶಬ್ದಗಳು.

ಇಲ್ಲಿ ವೀಪ್ಸೆಯಲ್ಲಿ ದ್ವಿರುಕ್ತಿ ಬಂದಿದೆ. ವೀಪ್ಸೆ ಎಂದರೆ ವ್ಯಾಪ್ತಿಯ ಪ್ರತಿಪಾದನ ಮಾಡುವ ಇಚ್ಛೆ. ಯಾರು ಯಾರು ಇದ್ದಾರೋ ಅವರೆಲ್ಲರೂ ಎಂಬ ಅರ್ಥ. ಹಿಂದೆ ಪೂಷ ಮುಂತಾದ ಶಬ್ದಗಳಿಂದ ಅನೇಕ ಪ್ರತಿಗಳಲ್ಲಿ ಪರಮಾತ್ಮನು ಇದ್ದಾನೆ ಎಂದು ಹೇಳಿದುದು ಉಪಲಕ್ಷಣವಾಗಿದೆ. ಇತರ ಅನೇಕ ಪ್ರತೀಕಗಳಿಗೆ ಸಂಗ್ರಾಹಕವಾಗಿದೆ. ಅಲ್ಲಿಯೂ ಪ್ರಾಣ ಮುಂತಾದ ಅನೇಕ ಪ್ರತೀಕಗಳಲ್ಲಿಯೂ ವಿಷ್ಣುವು ಇದ್ದಾನೆಂದು ಹೇಳಿದಂತಾಯಿತು. ಅಲ್ಲೆಲ್ಲಾ ಇರುವ ಪರಮಾತ್ಮನ ರೂಪಗಳಿಗೆ ಭೇದ ಸಂದೇಹವು ಬಂದಾಗ ಯೋಽಸಾವಸೌ ಪುರುಷಃ ಸೋಽಹಮಸ್ಮಿ ಎಂಬ ವಾಕ್ಯವನ್ನು ಹೇಳಿದ್ದಾರೆ. ಯಾವ ಈ ಪುರುಷನು ಪ್ರಾಣಾದಿ ಅನೇಕಾನೇಕ ಪ್ರತೀಕಗಳಲ್ಲಿ ಇದ್ದಾನೋ ಅವನು ಸೋಽಹಮಸ್ಮಿ ನನ್ನ ಅಂತರ್ಯಾಮಿಯಾಗಿದ್ದಾನೆ. ಎಲ್ಲಾ ಪ್ರತೀಕಗಳಲ್ಲಿಯೂ ನನ್ನಲ್ಲಿಯೂ ಇರುವ ಆ ಪರಮಾತ್ಮನು ಒಬ್ಬನೇ ಆಗಿದ್ದಾನೆ ಎಂದು ತಾತ್ಪರ್ಯ. ಅಹಂಪದವು ಪ್ರತ್ಯಗಾತ್ಮನಾದ ಜೀವಾಂತರ್ಯಾಮಿಯಾದ ಪರಮಾತ್ಮನಲ್ಲಿ ಮುಖ್ಯವಾಗಿದೆ. ಆದುದರಿಂದ ಅದರ ಜೊತೆಗೆ ಅಸ್ಮಿ ಎಂಬ ಉತ್ತಮಪುರುಷ ಪ್ರಯೋಗವು ಸರಿಯಾಗಿದೆ ಎಂದೇ ತಿಳಯಬೇಕು.

**ನನು ಪರಮೇಶ್ವರಸ್ಯ ಯತ್ ಕಲ್ಯಾಣರೂಪತ್ವಮುಕ್ತಂ, ಯಚ್ಚ ಸೋಽಹಮಸ್ಮೀತಿ ಜೀವಾಂತರ್ಗ-ತಸ್ಯ ನಿತ್ಯಾಸ್ತಿತ್ವಮುಕ್ತಂ ತನ್ನ ಯುಕ್ತಮ್ । ದೇಹನಾಶಸ್ಯ ಪ್ರತ್ಯಕ್ಷಾದಿಸಿದ್ಧತಯಾ ತದಂತರ್ಗತಸ್ಯ ಜೀವಸ್ಯ ಮರಣಾದ್ಯವಶ್ಯಂಭಾವಾದಿತ್ಯಾಶಂಕಾಂ ಕೈಮುತ್ಯೇನ ನಿರಾಹ ವಾಯುರಿತಿ ।**

**ವಾಯುರನಿಲಮಮೃತಮಥೇದಂ ಭಸ್ಮಾಂತꣳ ಶರೀರಮ್ ॥ 18 ॥**

Rarest Archiver

**ಯದ್ಯಪೀದಂ ಶರೀರಂ ಭಸ್ಮಾಂತಂ ತಥಾऽಪಿ ತದಂತರ್ಗತಸ್ಯ ಹರೇರ್ನ ಮರಣಾದಿದೋಷ-ಪ್ರಸಕ್ತಿಃ । ಕುತಃ ? ಅನಿಲಂ ಅಃ ಬ್ರಹ್ಮೈವ ನಿಲಂ ನಿಲಯನಂ ಆಶ್ರಯೋ ಯಸ್ಯ ಸೋऽನಿಲಃ । ಪರಮೇಶ್ವರಾಶ್ರಿತೋ ವಾಯುರಪಿ ಯದಾऽಮೃತಃ ನಿತ್ಯಃ ಅಥ ತದಾ ಪರಮೇಶ್ವರೋऽಮೃತ ಇತಿ ಕಿಮು ವಕ್ತವ್ಯಮಿತ್ಯರ್ಥಃ । ಅನಿಲಾಮೃತಪದಯೋಃ ಲಿಂಗವ್ಯತ್ಯಯೋ ಜ್ಞೇಯಃ । ವಾಯೋರಮೃತತ್ವಂ ನಿತ್ಯ-ಜ್ಞಾನತ್ವೇನ ಜ್ಞೇಯಂ, 'ಅತಿರೋಹಿತವಿಜ್ಞಾನಾದ್ವಾಯುರಪ್ಯಮೃತಃ ಸ್ಮೃತಃ' ಇತ್ಯುಕ್ತೇಃ । 'ಏತೇನ ಮಾತರಿಶ್ವಾ ವ್ಯಾಖ್ಯಾತಃ' (ಬ್ರ.ಸೂ.2.3.8) ಇತ್ಯತ್ರ ಭಾಷ್ಯಾದೌ ತಥಾ ನಿರ್ಣಯಾಚ್ಚೇತಿ ॥ 18 ॥**

**ಓಂ ಕ್ರತೋ ಸ್ಮರ ಕೃತꣳ ಸ್ಮರ ಓಂ ಕ್ರತೋ ಸ್ಮರ ಕೃತꣳ ಸ್ಮರ ॥ 19 ॥**

**ಅಥ ಪ್ರವಣಪ್ರತೀಕಂ ಪ್ರಾರ್ಥಯತೇ ಓಮಿತಿ । ಅತತ್ವಾದಿಗುಣಯುಕ್ತತಯಾ ಓಮಿತ್ಯುಚ್ಯಮಾನ । ಕ್ರತೋ ಜ್ಞಾನರೂಪ ಹರೇ ಮಾಮಿತಿ ಶೇಷಃ । ಸ್ಮರ ಅನುಗೃಹಾಣ । ಕೃತಂ ಮದೀಯಂ ಧ್ಯಾನಾದಿಕಂ ಕರ್ಮ ಸ್ಮರ । ಧ್ಯಾನಾದಿನಾ ಮಯಾ ಕೃತೇನ ಮಯ್ಯನುಗ್ರಹೋನ್ಮುಖೋ ಭವೇತ್ಯರ್ಥಃ । ನಿತ್ಯ ಜ್ಞಪ್ತಿಸ್ವರೂಪಸ್ಯ ಸಂಸ್ಕಾರಜನ್ಯಸ್ಮರಣಾಯೋಗಾತ್ । ಅಭ್ಯಾಸಸ್ತಾತ್ಪರ್ಯಾರ್ಥಃ ॥ 19 ॥**

ಹಿಂದೆ 16ನೇ ಮಂತ್ರದಲ್ಲಿ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಎಂದು ಪರಮಾತ್ಮನಿಗೆ ಪರಮ-ಕಲ್ಯಾಣಸ್ವರೂಪವಾದ ದೇಹವಿದೆ ಎಂದು ಹೇಳಿದ್ದಾಯಿತು. ಸೋऽಹಮಸ್ಮಿ ಎಂಬಲ್ಲಿ ಜೀವಾಂತರ್ಗತನಾದ ಪರಮಾತ್ಮನಿಗೆ ನಿತ್ಯದಲ್ಲಿಯೂ ಸತ್ತಾ(ಇರುವಿಕೆ) ಇದೆ ಎಂದು ಹೇಳಿದ್ದಾಯಿತು. ಅದು ಯುಕ್ತವಲ್ಲ, ಏಕೆಂದರೆ ದೇಹನಾಶವು ಪ್ರತ್ಯಕ್ಷ-ಸಿದ್ಧವಾದುದರಿಂದ ದೇಹದ ಒಳಗಿರುವ ಜೀವನಿಗೂ ಕೂಡ ಮರಣಾದಿಗಳು, ಪ್ರತ್ಯಗಾತ್ಮನಾದ ಪರಮಾತ್ಮನಿಗೂ ಅವಶ್ಯಂ ಭಾವಿಯಾಗಿದೆ ಎಂಬ ಸಂದೇಹವನ್ನು ಇಲ್ಲಿ ಕೈಮುತ್ಯನ್ಯಾಯದಿಂದ ಪರಿಹರಿಸುತ್ತಾರೆ. ಅವನಿಗೆ ಮರಣವು ಇಲ್ಲ, ಅವನೊಳಗಿದ್ದವನಿಗೆ ಅದು ಇಲ್ಲವೆಂದು ಏನು ಹೇಳತಕ್ಕದ್ದು! ಇದೇ ಕೈ ಮುತ್ಯನ್ಯಾಯ.

ಈ ಶರೀರವು ಒಂದು ದಿನ ಭಸ್ಮವಾಗುತ್ತದೆ. ಹಾಗಿದ್ದರೂ ಕೂಡ ಅದರಲ್ಲಿ ಅಂತರ್ಗತನಾದ ಪರಮಾತ್ಮನಿಗೆ ಮರಣಾದಿ ದೋಷಗಳು ಬರುವುದಿಲ್ಲ, ಏತಕ್ಕೆಂದರೆ ಅನಿಲನಾದ ಆಕಾರಶಬ್ದವಾಚ್ಯನಾದ ಪರಬ್ರಹ್ಮನೇ ನಿಲ ಎಂದರೆ ನಿಲಯನ ಆಶ್ರಯನಾಗಿ ಉಳ್ಳ ಒಟ್ಟಿನಲ್ಲಿ ಪರಮೇಶ್ವರಾಶ್ರಿತನಾದ ವಾಯುವೂ ಕೂಡ ಅಮೃತನಾಗಿರುತ್ತಾನೆ ನಿತ್ಯ-ನಾಗಿರುತ್ತಾನೆ. ಹೀಗಿರುವಾಗ ಆ ಪರಮೇಶ್ವರನು ಅಮೃತನೆಂದು ಹೇಳತಕ್ಕದ್ದೇನು. ಅನಿಲಂ ಅಮೃತಂ ಎಂಬ ಪದಗಳು ಉಪನಿಷತ್ತಿನಲ್ಲಿ ನಪುಂಸಕಲಿಂಗವಾಗಿದ್ದರೂ ನಾವು ಅವೆರಡು ಶಬ್ದಗಳನ್ನು ಪುಲ್ಲಿಂಗ ಪ್ರಥಮಾಂತವಾಗಿ ಅನಿಲಃ ಅಮೃತಃ ಎಂದು ವ್ಯತ್ಯಾಸ ಮಾಡಿಕೊಳ್ಳಬೇಕು; ಇಲ್ಲಿ ವಾಯುವು ನಿತ್ಯಜ್ಞಾನವುಳ್ಳವನಾದುದರಿಂದ ಅಮೃತ ಎಂಬ ಶಬ್ದದಿಂದ ಹೇಳಲ್ಪಟ್ಟಿದ್ದಾನೆ.

(ಅತಿರೋಹಿತವಿಜ್ಞಾನಾತ್ ವಾಯುರಪ್ಯಮೃತಃ ಸ್ಮೃತಃ ಮುಖ್ಯಾಮೃತಃ ಸ್ವಯಂ ರಾಮಃ ಪರಮಾತ್ಮಾ ಸನಾತನಃ ಎಂಬ ಪ್ರಮಾಣದಂತೆ ಪ್ರಳಯಕಾಲದಲ್ಲಿಯೂ ಪರಮಾತ್ಮ ವಿಷಯದ ಜ್ಞಾನವು ತಿರೋಧಾನವಾಗದಿರುವುದರಿಂದ ವಾಯುವನ್ನು ಅಮೃತ ಎಂದು ಹೇಳುತ್ತೇವೆ. ಮುಖ್ಯನಾದ ಅಮೃತನು ಶ್ರೀರಾಮಾಭಿನ್ನನಾದ ಶ್ರೀಮನ್ನಾರಾಯಣನೊಬ್ಬನೇ

Rarest Archiver

ಎಂದು ರಾಮಸಂಹಿತಾಪ್ರಮಾಣವು ಹೇಳುತ್ತದೆ. ಏತೇನ ಮಾತರಿಶ್ವಾ ವ್ಯಾಖ್ಯಾತಃ (ಬ್ರಹ್ಮ ಸೂ 2-3-8) ಈ ಸೂತ್ರದಲ್ಲಿ ಮತ್ತು ಭಾಷ್ಯಟೀಕೆಗಳಲ್ಲಿ ವಾಯುದೇವರಿಗೂ ವಿಜ್ಞಾನತಿರೋಧಾನವಿಲ್ಲ ಎಂದು ನಿರ್ಣಯಿಸಿದ್ದಾರೆ.

ಅನಂತರ ಓಂಕಾರವೆಂಬ ಪ್ರತೀಕದಲ್ಲಿ ಇರುವ ಶ್ರೀಹರಿಯನ್ನು ಪ್ರಾರ್ಥಿಸುತ್ತಾರೆ. ಸರ್ವತ್ರ ಪ್ರವಿಷ್ಟನಾಗಿ ಇರುವಿಕೆ ಎಂಬ ಗುಣವುಳ್ಳವನಾದುದರಿಂದ ಓಂ ಎಂದು ಹೇಳಲ್ಪಡುವ ಜ್ಞಾನರೂಪನಾದುದರಿಂದ ಕ್ರತುವೆಂದು ಹೇಳಲ್ಪಡುವ ಶ್ರೀಹರಿಯೇ! ನನ್ನನ್ನು ಸ್ಮರಿಸು ಅನುಗ್ರಹಿಸು. ನಾನು ಮಾಡಿರುವ ನಿನ್ನ ಪ್ರೇರಣೆಯಿಂದಾಗಿರುವ ಧ್ಯಾನ ಮನನ ಮುಂತಾದ ಕ್ರಮವನ್ನು ಸ್ಮರಿಸು. ನಾನು ಮಾಡಿರುವ ನನ್ನಿಂದ ನೀನು ಮಾಡಿಸಿರುವ ಧ್ಯಾನಾದಿಗಳಿಂದ ನನ್ನಲ್ಲಿ ಅನುಗ್ರಹೋನ್ಮುಖನಾಗು ಎಂದು ಪ್ರಾರ್ಥನೆಯ ಅಭಿಪ್ರಾಯ. ಉಪನಿಷತ್ತಿನಲ್ಲಿ ಸ್ಮರ ಸ್ಮರಿಸು ಎಂದಿದ್ದರೂ, ನನ್ನಲ್ಲಿ ಅನುಗ್ರಹೋನ್ಮುಖನಾಗು ಎಂದರ್ಥವನ್ನು ಹೇಳಿದ್ದೇವೆ. ಏಕೆಂದರೆ ಪರಮಾತ್ಮನು ನಿತ್ಯ ಜ್ಞಾನಸ್ವರೂಪನಾದುದರಿಂದ ಅವನಿಗೆ ಸಂಸ್ಕಾರ ಜನ್ಯವಾದ ಸ್ಮರಣವು ಕೂಡುವುದಿಲ್ಲ.

ಇಲ್ಲಿ ಸ್ಮರಸ್ಮರ ಎಂದು 2 ಬಾರಿ ಹೇಳಿದ್ದಾರೆ. ನನ್ನಲ್ಲಿ ಅನುಗ್ರಹೋನ್ಮುಖನಾಗು ಎಂಬ ವಿಷಯದಲ್ಲಿ ತಾತ್ಪರ್ಯವನ್ನು ತಿಳಿಸುವುದಕ್ಕೋಸ್ಕರ ಆವೃತ್ತಿಯನ್ನು ಹೇಳಲಾಗಿದೆ.

**ಕೃತಶ್ರವಣಾದಿನಾ ಪುರುಷೇಣ ಸಾಕ್ಷಾತ್ಕಾರಾರ್ಥಂ ಹರೇಃ ಪ್ರಾರ್ಥನಂ ಕಾರ್ಯಮಿತ್ಯತಸ್ತತ್-ಪ್ರಕಾರಂ ಹಿರಣ್ಮಯೇನೇತ್ಯಾದಿನೋಕ್ತ್ವಾಽಧುನಾ ಪ್ರಾಪ್ತಸಾಕ್ಷಾತ್ಕಾರೇಣಾಪಿ ಪುಂಸಾ ಮೋಕ್ಷಾರ್ಥಂ ಭಗವದುಪಾಸನಂ ಕಾರ್ಯಮಿತಿ ಭಾವೇನ ಅಗ್ನಿಪ್ರತೀಕಸ್ಥಭಗವತ್ಪ್ರಾರ್ಥನಾಪ್ರಕಾರಮಾಹ ಅಗ್ನ ಇತಿ ।**

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್**
**ವಿಶ್ವಾನಿ ದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ**
**ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥ 20 ॥**

**ಅಂಗಂ ದೇಹಂ ಗುಣಭೂತಂ ಜಗದ್ವಾ ನಯತಿ ಪ್ರೇರಯತೀತಿ ವ್ಯುತ್ಪತ್ತ್ಯಾ ಅಗ್ನಿಪದಮುಖ್ಯಾರ್ಥಃ ಸನ್ನಗ್ನೌ ವಿದ್ಯಮಾನಹರೇ, ಅಸ್ಮಾನ್ ಸುಪಥಾ ಪುನರಾವೃತ್ತಿಹೀನಾರ್ಚಿರಾದಿಮಾರ್ಗೇಣ ರಾಯೇ ಮೋಕ್ಷಾಖ್ಯವಿತ್ತಾಯ ನಯ । ಕುತಃ ? ಹೇ ದೇವ ಅಸ್ಮದನುಷ್ಠಿತಾನಿ ವಿಶ್ವಾನಿ ಸಂಪೂರ್ಣಾನಿ, ಮೋಕ್ಷಾಯ ಪರ್ಯಾಪ್ತಾನೀತಿ ಯಾವತ್, ವಯುನಾನಿ ಜ್ಞಾನಾನಿ ಭವಾನ್ ವಿದ್ವಾನ್ ವೇದ, ಪ್ರಾರಬ್ಧಕರ್ಮಯುಕ್ತಸ್ಯ ಕಥಂ ಮೋಕ್ಷ ಇತ್ಯತ ಉಕ್ತಂ ಯುಯೋಧೀತಿ । ಅಸ್ಮಾನ್ ಇತ್ಯತ್ರಾಪ್ಯನು-ಷಜ್ಯತೇ । ಅಸ್ಮಾನ್ ಜುಹುರಾಣಂ ಅಲ್ಪಾನ್ ಕುರ್ವತ್, ಸಂಸಾರೇ ಪರಿವರ್ತಯದಿತಿ ಯಾವತ್, ಏನಃ ಪಾಪಂ, ಅನಿಷ್ಟಂ ಕರ್ಮೇತಿ ಯಾವತ್, ಅಸ್ಮತ್ ಅಸ್ಮತ್ತಃ ಯುಯೋಧಿ ವಿಯೋಜಯ । ಯುಯು ವಿಯೋಗ ಇತಿ ಧಾತೋರ್ಲುಗ್ವಿಕರಣಂ ವಯಂ ತು ತೇ ತುಭ್ಯಂ ಭೂಯಿಷ್ಠಾಂ ಭಕ್ತಿಜ್ಞಾನೋ-ಪೇತಾಂ ನಮ ಉಕ್ತಿಂ ನಮ ಇತ್ಯುಕ್ತಿಂ ವಿಧೇಮ ಕುರ್ಮಃ, ನ ತು ತತ್ಪ್ರತಿಕರ್ತುಂ ಶಕ್ನುಮ ಇತಿ ॥ 20 ॥**

Rarest Archiver

ಶ್ರವಣಾದಿಗಳನ್ನು ಮಾಡಿರುವ ಭಕ್ತನು ಸಾಕ್ಷಾತ್ಕಾರಕ್ಕೋಸ್ಕರ ಶ್ರೀಹರಿಯನ್ನು ಪ್ರಾರ್ಥಿಸಬೇಕು. ಆ ಪ್ರಾರ್ಥನೆಯ ಪ್ರಕಾರವನ್ನು ಹಿಂದೆ ಹಿರಣ್ಮಯೇನ ಪಾತ್ರೇಣ ಎಂಬಲ್ಲಿ ಹೇಳಿ ಈಗ ಸಾಕ್ಷಾತ್ಕಾರವನ್ನು ಹೊಂದಿದ ಜ್ಞಾನಿಪುರುಷನು ಕೂಡ ಮೋಕ್ಷಕ್ಕೋಸ್ಕರ ಪರಮಾತ್ಮನ ಉಪಾಸನೆಯನ್ನು ಮಾಡಬೇಕು ಎಂಬ ಅಭಿಪ್ರಾಯದಿಂದ ಅಗ್ನಿ ಎಂಬ ಪ್ರತೀಕದಲ್ಲಿರುವ ಭಗವಂತನ ಪ್ರಾರ್ಥನೆಯ ರೀತಿಯನ್ನು ಇಲ್ಲಿ ಹೇಳುತ್ತಿದ್ದಾರೆ. ಹೇ ಅಗ್ನಿಯೇ ಅಂಗ ಎಂದರೆ ದೇಹವನ್ನು ಅಥವಾ ಪರಮಾತ್ಮನಿಗೆ ಅಂಗ ಅಂದರೆ ಗುಣವಾಗಿರುವ ಅಂದರೆ ಅವನಿಗಿಂತ ಅಪ್ರಧಾನವಾದ ಜಗತ್ತನ್ನು ಪ್ರೇರಿಸುವುದರಿಂದ ಅಂಗಂ ನಯತೀತಿ ಅಗ್ನಿಃ ಎಂಬ ವ್ಯುತ್ಪತ್ತಿಯಿಂದ ಅಗ್ನಿಪದದ ಮುಖ್ಯಾರ್ಥವಾಗಿದ್ದು ಅಗ್ನಿಯಲ್ಲಿರುವ ಹರಿಯೇ ಎಂದು ಅಗ್ನೇ ಎಂಬುದರ ಅರ್ಥ. ನೀನು ನಮ್ಮನ್ನು ಸುಪಥಾ ಪುನರಾವೃತ್ತಿರಹಿತವಾದ ಅರ್ಚಿರಾದಿಮಾರ್ಗದಿಂದ ರಾಯೇ ಮೋಕ್ಷವೆಂಬ ಸಂಪತ್ತಿಗೋಸ್ಕರ ನಯ ಕರೆದುಕೊಂಡು ಹೋಗು. ಏಕೆ ಎಂದರೆ ಹೇ ದೇವ, ಎಲೈ ಕ್ರೀಡಾದಿಗುಣಯುಕ್ತ-ನಾದ ಶ್ರೀ ಹರಿಯೇ! ನಾವು ಅನುಷ್ಠಾನ ಮಾಡಿರುವ ಸಂಪೂರ್ಣವಾದ ಅಂದರೆ ಮೋಕ್ಷವನ್ನು ಪಡೆಯುವುದಕ್ಕೆ ಸಾಕಾಗಿರುವ ನನ್ನ ಜ್ಞಾನಗಳನ್ನು ನೀನು ತಿಳಿದಿದ್ದೀ. ಪ್ರಾರಬ್ಧಕರ್ಮದಿಂದ ಕೂಡಿರುವ ನಮಗೆ ಮೋಕ್ಷವು ಹೇಗೆ ಬರಲು ಸಾಧ್ಯ ಎಂಬ ಪ್ರಶ್ನೆಗೆ ಉತ್ತರವಾಗಿ ಯುಯೋಧಿ ಇತ್ಯಾದಿ ಮಾತನ್ನು ಹೇಳಿದ್ದಾರೆ. ನಮ್ಮನ್ನು ಸಂಸಾರದಲ್ಲಿಯೇ ತಳ್ಳಿ ಅತ್ಯಲ್ಪರನ್ನಾಗಿ ಸಂಸಾರದಲ್ಲೇ ಒದ್ದಾಡಿಸುತ್ತಿರುವ ನಮ್ಮ ಪಾಪವನ್ನು (ಅನಿಷ್ಟಕರ್ಮವನ್ನು ಎಲ್ಲವನ್ನೂ) ನಮ್ಮಿಂದ ದೂರ-ಮಾಡು. (ಯುಯೋಧಿ = ಇದು ಯುಯು ವಿಯೋಗೆ ಎಂಬ ಲುಗ್‌ವಿಕರಣ ಧಾತುವಿನ ಲೋಟ್ ಮಧ್ಯಮ ಪುರುಷ ಏಕವಚನದ ರೂಪ) ನಾವಾದರೋ ನಿನಗೆ ಭಕ್ತಿ ಜ್ಞಾನಗಳಿಂದ ಕೂಡಿರುವ ನಮಃ ಎಂಬ ಮಾತನ್ನು ಮಾತ್ರವೇ ಸಮರ್ಪಿಸುತ್ತೇವೆ; ನಿನಗೆ ಯಾವ ರೀತಿಯಾದ ಪ್ರತ್ಯುಪಕಾರವನ್ನು ಮಾಡಲು ಸಮರ್ಥರಲ್ಲ.

**ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥**

ಖಂಡಾರ್ಥಕಾರರಾದ ಶ್ರೀರಾಘವೇಂದ್ರತೀರ್ಥಗುರು ಸಾರ್ವಭೌಮರು ಕೊನೆಯ ಮಂಗಳಾಚರಣೆಯನ್ನು ಮಾಡುತ್ತಾರೆ.

ಸಕಲಗುಣಪರಿಪೂರ್ಣನಾದ ಸಮಸ್ತದೋಷದೂರನಾದ ಲಕ್ಷ್ಮೀಪ್ರಾಣರಿಗೆ ಸ್ವಾಮಿಯಾದ, ಭಕ್ತರಿಗೆ ಇಷ್ಟಾರ್ಥ-ಪ್ರದನಾದ ಶ್ರೀಮನ್ಮಹಾವಿಷ್ಣುವಿಗೆ ನಮಸ್ಕಾರ.

**ಈಶಾವಾಸ್ಯೋಪನಿಷದೋ ಭಾಷ್ಯಾದ್ಯುಕ್ತಾರ್ಥಸಂಗ್ರಹಃ ।**
**ರಾಘವೇಂದ್ರೇಣ ಯತಿನಾ ಕೃತೋಽಯಂ ಶಿಷ್ಯಯಾಂಚಯಾ ॥**

ಶಿಷ್ಯರು ಪ್ರಾರ್ಥನೆ ಮಾಡಿದಾಗ ಶ್ರೀರಾಘವೇಂದ್ರನೆಂಬ ಯತಿಯಿಂದ ಈಶಾವಾಸ್ಯೋಪನಿಷತ್ತಿನ ಭಾಷ್ಯ ಟೀಕೆಗಳಲ್ಲಿ ಹೇಳಿರುವ ಅರ್ಥಸಂಕ್ಷೇಪವು ಮಾಡಲ್ಪಟ್ಟಿದೆ.

***ಇತಿ ಶ್ರೀಮದೀಶಾವಾಸ್ಯೋಪನಿಷತ್‌ಖಂಡಾರ್ಥಃ ಸಂಪೂರ್ಣಃ ॥***

*ಇಂತು ಶ್ರೀರಾಘವೇಂದ್ರಯತಿ ವಿರಚಿತವಾದ ಈಶಾವಾಸ್ಯೋಪನಿಷತ್‌ಖಂಡಾರ್ಥವು ಸಮಾಪ್ತವಾಯಿತು ॥*

॥ ಶ್ರೀಕೃಷ್ಣಾರ್ಪಣಮಸ್ತು ॥



Rarest Archiver